ಕನ್ನಡ ಕಾವ್ಯಮಾಲೆ — ೧೭

# ದೋಣಿಯ ಬಿನದ

ಮತ್ತು

# ಕವಿ

ಪು. ತಿ. ನರಸಿಂಹಾಚಾರ್

ಮೈಸೂರು :
ಕಾವ್ಯಾಲಯ
೧೯೪೩

# ಅ ರ್ಪ ಣೆ

## ಪಂಡಿತ ಕವಿ ಶ್ರೀ ಹೆಮ್ಮಿಗೆ ದೇಶಿಕಾಚಾರ್ಯರಿಗೆ

ನೀ ಹರಸಿದೆ, ವರವಾಯ್ತಿದು
ನೇಹಿಗ, ನಡೆಗೆಟ್ಟು ನಿಂತ ಕಾವ್ಯದ ತೇರೆ-
ನ್ನೂಹೆಯುಮುಚ್ಚರಿಗೊಳೆ ಮನ-
ವೋಹೋ ಎನೆ ಭರದಿ ಸಾಗಿ ನೆಲೆಯಾಯ್ತಿದಿಗೋ.

ಎನ್ನಯ ಹೃದಯೋತ್ಸವಗಳೊ-
ಳಿನ್ನಾರ್, ಮಣಿ, ನಿನ್ನ ತೆರದೆ ಸಂಭ್ರಮಗೊಳ್ವರ್
ಚಿನ್ನೆಲೆ ಭಾಪೆನ್ನುತ ನೀಂ
ಮನ್ನಿಸಲಪ್ಪಾ ಸೊಗಕ್ಕೆ ಮುಡುಪಿದು ಪಡಿಯೇ!

# ಮೊದಲ ಮಾತು

'ದೋಣಿಯ ಬಿನದ'ದ ವಸ್ತು ಲಘು. ಇದರಲ್ಲಿನ ಹಾಡುಗಳಿಂದ ಇದಕ್ಕೆ ಒಂದು ಬೆಲೆ ಬಂದೀತೆಂದು ನಿರೀಕ್ಷಿಸುತ್ತೇನೆ. · ಇಲ್ಲಿನ ತರುಣ ತರುಣಿಯರ ನಡೆವಳಿಕೆಗಳು ಈಗಿನ ಕಾಲದಲ್ಲಿ ನಡೆಯಬಹುದಾದಂಥವೇ. ವಾಕ್‌ಚಿತ್ರರಸಿಕರು ಇಲ್ಲಿನ ಲಘು ಪ್ರಣಯದ ವಿನೋದವನ್ನು ಮೆಚ್ಚಬಹುದು. ಇಲ್ಲಿ ತೋರಿಬರುವ ಜಲಕನ್ಯೆಯರು ರಂಗದ ಅಲಂಕಾರಪಾತ್ರ ಮಾತ್ರವಲ್ಲವೆಂದೂ, ತರುಣನನ್ನು ಮುಳುಗಿಸಿ ಸಾಯಿಸುವ ಕಾರ್ಯದಲ್ಲಿ ಹೇಗೆಯೋ ಹಾಗೆಯೇ ಯುವಕನು ತರುಣಿಯನ್ನು ಕೂಡಿಕೊಂಡು ದೋಣಿಯಲ್ಲಿ ಸಾಗುವಾಗ ಅದನ್ನು ತೇಲಿಸಿ ನಡೆಸುವುದರಲ್ಲೂ ಒಂದೇ ತೆರನಾದ ಉತ್ಸಾಹ–ಆನಂದಗಳನ್ನು ತೋರುವ ಅವರು ಪ್ರಕೃತಿ ಮಾಯೆಯ ಒಂದು ಸತ್ಯಾಂಶವನ್ನು ರೂಪಿಸುತ್ತಾರೆಂದೂ ಈಗ ನನಗೆ ತೋರುತ್ತದೆ.

'ಕವಿ' ಹನ್ನೆರಡು ಹದಿನೈದು ವರ್ಷಗಳ ಬೆಳಸು. 'ಹೊನಲ ರಾಣಿ'ಗೂ 'ಗಾಳಿ'ಗೂ ಸುಮಾರು ಒಂಬತ್ತು ಹತ್ತು ವರ್ಷಗಳ ಅಂತರವಿದೆ. ಈ ರೂಪಕದ ಮುಗಿವಿನಲ್ಲಿ ನಂಬಿಕೆ ತಪ್ಪಿ ನಾನು 'ಕವಿ' ಎಂಬ ಅಷ್ಟಷಟ್ಪದಿಯನ್ನೂ 'ಹೊನಲ ಹಾಡ'ನ್ನೂ (ಸ್ವಲ್ಪ ರೂಪಾಂತರ ಗೊಳಿಸಿ) 'ಮಾಂದಳಿರಿ'ನಲ್ಲಿ ಅಚ್ಚುಹಾಕಿಸಿದೆ. ಈ ತೆರದಲ್ಲಿ ಇಂದು ಈ ರೂಪಕವು ಪೂರ್ಣವಾಗಿರುವುದು ನನಗೆ ಸಮಾಧಾನವನ್ನು ತಂದಿದೆ. ಮತಿ ಎಚ್ಚತ್ತರೆ–ಬರಿ ಪ್ರಶ್ನೆ–ಜಿಜ್ಞಾಸೆ; ಇವಕ್ಕೆ ಉತ್ತರ ಹೃದಯ ನಲವಿನಲ್ಲಿ ಸಂಪೂರ್ಣವಾಗಿ ಎಚ್ಚರುಗೊಳ್ಳುವಿಕೆ— ಈ ರೀತಿಯ ಒಂದು ಅರ್ಥ ಈ ಕಾವ್ಯದಲ್ಲಿ ಧ್ವನಿತವಾಗಬಹುದು.

ಈ ಕೃತಿಗಳನ್ನು ಆದಷ್ಟು ಶುಚಿಗೊಳಿಸಿ ಹೊರತೋರುವ ಕಾರ್ಯದಲ್ಲಿ ಎಂದಿನಂತೆ ನನಗೆ ನೆರವಾದ ಗೆಳೆಯ ತೀ. ನಂ. ಶ್ರೀ. ಯವರಿಗೂ ಈ ದುರ್ಭಿಕ್ಷಕಾಲದಲ್ಲಿಯೂ ಪದ್ಯಭೂಯಿಷ್ಠವಾದ ಈ ಕೃತಿಗಳನ್ನು ಅಚ್ಚು ಹಾಕಿಸಿ ಪ್ರಚಾರಮಾಡಲು ಹೊಣೆಗಾರರಾಗಿ ನಿಂತಿರುವ ಸನ್ಮಿತ್ರ ಕೂಡಲಿ ಚಿದಂಬರಂ ಅವರಿಗೂ ನಾನು ವಿಶೇಷ ಕೃತಜ್ಞನಾಗಿದೇನೆ.

ಬೆಂಗಳೂರು,
೨೧–೧೧–೧೯೪೩.

**ಪು. ತಿ. ನ.**

# ಪ್ರಕಾಶಕರ ಮಾತು

ಈ ಪುಸ್ತಕದಲ್ಲಿನ ಕೃತಿಗಳನ್ನು ಸಂತೋಷದಿಂದ ಪ್ರಕಟಿಸುತ್ತಿದೇವೆ. ಇಲ್ಲಿನ ಎರಡು ರೂಪಕಗಳೂ ಕನ್ನಡಕ್ಕೆ ಹೊಸ ಬಗೆಯ ರಚನೆಗಳು. 'ದೋಣಿಯ ಬಿನದ'—ಮೇಲು ನೋಟಕ್ಕೆ ವಾಕ್ಚಿತ್ರದಷ್ಟು ಆಕರ್ಷಕ ವಾದ ಒಂದು ಪ್ರಣಯ ವಿನೋದ. ಆದರೆ ಇಲ್ಲಿನ ಮರೆಯಲಾಗದ ಹಾಡುಗಳೂ, ಪ್ರಕೃತಿ ಮಾನವರ ಸಂಬಂಧದ ಚಿತ್ರವೂ, ಸಲಿಲದ ರುದ್ರ-ಕೋಮಲ ಸೌಂದರ್ಯವೇ ಪ್ರತ್ಯಕ್ಷವಾಗಿ ರೂಪುವಡೆದ ಜಲಕನ್ನಿಕೆಯರ ಸಾನ್ನಿಧ್ಯವೂ ಈ ಕೃತಿಗೆ ಒಂದು ಅಲೌಕಿಕವಾದ ಕಳೆಯನ್ನು ತಂದಿವೆ.

'ಕವಿ' ಸೀಮಾತೀತವಾದ ಕೃತಿ. ಅನಾದಿಕಾಲದಿಂದ ಮಾನವನ ಮನಸ್ಸನ್ನು ಸೂರೆಗೊಂಡು ಅವನಲ್ಲಿ ಪ್ರಶ್ನೆಗಳನ್ನು ಎಬ್ಬಿಸಿರುವ ಗಿರಿ ವನ ನದಿ ಚೆಲುವದೇವಿ ಮಾನವನ ತೇಜಸ್ಸು—ಈ ಪ್ರಕೃತಿ ಶಕ್ತಿಗಳೇ ಇಲ್ಲಿಯ ಪಾತ್ರಗಳು. ಈ ಪಾತ್ರಗಳ ಹೆಸರುಗಳೇ ಈ ಕೃತಿಯ ವಿಶ್ವವ್ಯಾಪಕ ದೃಷ್ಟಿಯನ್ನು ತೋರುತ್ತವೆ.

ಇಂಥ ಕೃತಿಗಳು ದೊರಕಿ ಬಂದರೆ ಎಂಥ ದುರ್ಭಿಕ್ಷ ಕಾಲದಲ್ಲಿಯೂ ಅವನ್ನು ಪ್ರಕಾಶಕರೂ ಓದುಗರೂ ಸಂತೋಷದಿಂದ ಬರಮಾಡಿಕೊಳ್ಳುವ ರೆಂಬುದರಲ್ಲಿ ಸಂದೇಹವಿಲ್ಲ. ಮಾಲೆಗೆ ಇವನ್ನು ಸೇರಿಸಿಕೊಟ್ಟ ಮಿತ್ರ ನರಸಿಂಹಾಚಾರ್ಯರು ವಂದ್ಯರು.

'ಅಹಲ್ಯೆ'ಯಿಂದ 'ಕವಿ'ಯ ವರೆಗಿನ ಎಲ್ಲ ಪ್ರಕಟನೆಗಳಲ್ಲಿ ನಾನು ಮಿತ್ರರಾದ ಶ್ರೀಮಾನ್ ತೀ. ನಂ. ಶ್ರೀ. ಅವರಿಂದ—ಹಸ್ತಪ್ರತಿಗಳನ್ನು ನೋಡಿ ಸಲಹೆ ಕೊಡುವುದರಿಂದ ಧನ ಸಹಾಯದ ವರೆಗೆ—ಎಲ್ಲ ಬಗೆಯ ನೆರವನ್ನೂ ಪಡೆದಿದ್ದೇನೆ. ಅದಕ್ಕಾಗಿ ಅವರಿಗೆ ಇಲ್ಲಿ ನನ್ನ ವಿಶೇಷ ಕೃತಜ್ಞತೆಯನ್ನು ಸೂಚಿಸಲು ತುಂಬ ಸಂತೋಷವಾಗುತ್ತದೆ.

ಈ ಪುಸ್ತಕವನ್ನು ಅಂದವಾಗಿ ಅಚ್ಚುಮಾಡಿಕೊಟ್ಟ ಬೆಂಗಳೂರು ಪ್ರೆಸ್ಸಿನವರನ್ನು ನೆನೆಯುವುದು ಅಪ್ರಕೃತವಾಗಲಾರದು.

**ಕೂಡಲಿ ಚಿದಂಬರಂ.**

## ಪಾತ್ರಗಳು

ನವತರುಣ

ನವತರುಣಿ (ಸರಸ)

ಮೂವರು ಯುವಕರು

ಮೂವರು ಯುವತಿಯರು

ಜಲಕನ್ನಿಕೆಯರು

**ಸ್ಥಾನ:—**

ಸರೋವರದ ಮಧ್ಯದಲ್ಲಿ ಒಂದು ಕೃತಕ ದ್ವೀಪ

**ಕಾಲ:—**

ಸಂಜೆ – ನಸುಕು

# ದೋಣಿಯ ಬಿನದ

(ಏಕಾಂಕ ಗೀತರೂಪಕ)

[ಕೆರೆಯ ಒಂದು ನಡುಗಡ್ಡೆಯಲ್ಲಿ ಒಂದು ದೋಣಿ ಕರೆಗಿದೆ. ಹತ್ತಿರ ಒಂದು ಕಲ್ಲಿನ ಮೇಲುಗಡೆ ತಲೆಯಮೇಲೆ ಕೈಯಿಟ್ಟು ಚಿಂತಾಗ್ರಸ್ತನಾಗಿ ತರುಣನೊಬ್ಬ ಕುಳಿತಿದಾನೆ. ಕೆರೆಯ ತೆರೆಗಳು ಜಲಕನ್ಯೆಯರಂತೆ ಈ ತೆರ ಮಾತಾಡುತ್ತವೆ. ನೋಟಕರಿಗೆ ಈ ಕನ್ಯೆಯರ ತಲೆ ತೋಳು ಮಾತ್ರ ಕಾಣಿಸುತ್ತವೆ. ಮಿಕ್ಕ ಅಂಗಗಳು ಹಳ್ಳದಲ್ಲಿವೆ.]

ಜಲಕನ್ಯೆಯರು

(ಒಬ್ಬೊಬ್ಬರು ಒಂದು ನುಡಿಯನ್ನು ಹಾಡುತ್ತಾರೆ)

ನೀನುಸಿರಾಡುವ ಗಾಳಿಯೆ ಸುಡುವುದು
ನಡೆವೆಡೆ ಭಾರಕೆ ನೆಲ ಗೋಳಿಡುವುದು.

ಕಣ್ತೆರೆದೂ ಕತ್ತಲೆ ಮನಕಾಯ್ತು
ಕಿವಿ ತೆರೆದೂ ಜಗ ನೀರವವಾಯ್ತು.

ನೀ ಹಾರಿದೆ ತಾರಾಡಿದೆ ಇದುವರೆಗೂ
ಸ್ನೇಹಕೆಂದು ಪ್ರೇಮಕೆಂದು ಬಗೆ ಬಗೆಗೂ

ಈ ತಿರಿವಾಟವೆ ಆಸರಾಯ್ತಲಾ
ಈ ಬಯಲಾಟವೆ ಬೇಸರಾಯ್ತಲಾ.

ವಿಫಲಕರಣ ನಿನಗೆಟುಕದೆ ಇಂತು
ಜಗ ಸರಿಯುತ್ತಿರೆ ಜೀವಿಪೆ ಎಂತು?

ದೋಣಿಯು ಬಿನದ

ಬಾಳಿನ ಬಳ್ಳಿಗೆ ಆಸೆಯಾಸರೆ
ತಪ್ಪಿರೆ, ಬಡವಾ, ಬದುಕಬಲ್ಲರೆ?

ಇನ್ನು ಬಾರ ಓ ತಿರೆ ತೊರೆದಣುಗಾ
ತಣಿಪೆವಾವು ತಣ್ಣನೆ ಈ ಕೊರಗ.

ಎಲ್ಲರೂ

ನಮ್ಮಾ್ಮಲಿಂಗನ ಬಲು ಇಂಪು
ಪ್ರಾಣಕೆ ತಂಪು
ಆತ್ಮಕೆ ಪೆಂಪು
ಬಾ ಬಾ!—

[ಆತ ಆತ್ಮಹತ್ಯೆಗೆ ಮನಸ್ಸುಮಾಡಿದವನಂತೆ ಅಭಿನಯಿಸುತ್ತಾ ಮಾತು ಮುಗಿಯುವ ವೇಳೆಗೆ ಅವರ ಮಧ್ಯೆ ಬೀಳುತ್ತಾನೆ. ಅವರು ಈತನನ್ನು ಮುತ್ತಿ ಮುಳುಗೇಳಿಸುವಂತೆ ಅಭಿನಯಿಸುತ್ತಾರೆ. ಆತ ಮರೆಯಾಗುತ್ತಾನೆ.]

ಜಲಕನ್ಯೆಯರು

(ಒಬ್ಬೊಬ್ಬರು ಒಂದೊಂದು ಚರಣ ಹಾಡುತ್ತಾರೆ)

ನಾನುಗ್ಗಿ ನಾಸಿಕಕೆ ಉಸಿರ ತಡೆದೆ
ನಾ ಧುಮುಕಿ ಜಠರಕ್ಕೆ ಕರುಳ ತುಳಿದೆ
ನಾನೆದೆಯ ಸುತ್ತುವರಿದೆ.

ಬಣ್ಣ ಬಣ್ಣದ ರೂಪ ಕಣ್ಣ ಕಳೆದುರುಳುವಂತೆ
ನಾ ರೆಪ್ಪೆಗಳನದುಮಿ ನಿಂತೆ.

ಹಣತೆ ಕುಡಿಯೊಳು ಧೂಮವೆದ್ದಲೆಯುವಂತು
ನಂದುತಿರುವೀ ಪ್ರಾಣ ಪ್ರಜ್ಞೆಯೋಕರಿಪುದೆಂತು!

ಆದೊಡೆ ಹಾ ಪ್ರಾಣದ ಬಿಸಿ
ನನ್ನ ಸುಡುವುದು.
ಇದ ತಂಪಿಸಲೆನಗಾಗದು
ಎನಗು ಆಗದು.

ದೋಣಿಯ ಬಿನದ

ಈ ಜೀವದ ರಸ ಬಹು ಕಟು
ನಮ್ಮ ಉಣಿಸಿಗೆ
ಅರೆ ಮಾಗಿದೆ ಸ್ವಾದುವಲ್ಲ
ನಮ್ಮ ತಿನಿಸಿಗೆ—

ಸಾವ ಕಾಲಕುಳಿವ ಆಸೆ
ಇವಗೆ ಬಲಿಯಿತು
ಅದಕೆ ಪ್ರಾಣದಗ್ನಿ ನಮಗೆ
ದಕ್ಕದುಳಿಯಿತು.

ಕಾರವೋಡ ಪೆರೆಯನಗಿದು
ಉಗುಳುವಂತೆಯೇ
ನಾವೀತನನುಗುಳಿ ನಡೆವ
ದಡದೊಳಂತೆಯೇ.

[ಅವನನ್ನು ದಡಕ್ಕೆ ತಲಪಿಸಿ ಜೊಂಡಿನ ನಡುವೆ ಮಲಗಿಸುವರು. ಈ ಕಡೆ ದೋಣಿಯೊಂದು ಬರುತ್ತಿರುವುದು. ಅಲ್ಲೇಳು ಜನ—ನಾಲ್ವರು ತರುಣಿಯರು, ಮೂವರು ತರುಣರು—ಕುಳಿತಿರುವರು. ದೋಣಿ ಮೆಲ್ಲನೆ ನಡುಗಡ್ಡೆಯ ಹತ್ತಿರಕ್ಕೆ ಬರುತ್ತಿರುವಾಗ ಇವರು ಹಾಡುತ್ತಿರುತ್ತಾರೆ.]

ತರುಣ ತರುಣಿಯರು

(ಒಬ್ಬೊಬ್ಬರು ಒಂದೊಂದು ಪದ್ಯವನ್ನು ಹೇಳುವರು)
ತರಣಿಯೊಳು ಕುಳಿತಿಹೆವು ತರುಣ ತರುಣಿಯರು.
ಕೆಲಕೆ ಬನ ತಲಕೆ ಜಲ ಮೇಲೆ ಮುಗಿಲವರು.
ಪರಿಚಿತರು ನಾವಲ್ಲ
ಪರಿಚಯವೆ ಬೇಕಿಲ್ಲ
ಬನದೊಳಗೆ ಕಲೆತೆವು ದೋಣಿಯೊಳು ಕುಳಿತೆವು
ನಾವು ಬಿನದಿಗರು.
(ತರಣಿಯೊಳು ಕುಳಿತಿಹೆವು ತರುಣ ತರುಣಿಯರು.)

ಜಲದೊಳಗೆ ಹುಟ್ಟೆಳಿದು ಏಳ್ವ ದನಿ ಇನಿದು
ಹದ ತಪ್ಪಿ ಹನಿ ಚಿಮ್ಮೆ ಹೆಣ್ಣ ನಗೆ ಇನಿದು.
ನಮಗೆ ಹೊಳಲಿಡುವಂದ
ಸಂಜೆಗೆಳವೆರೆ ಚೆಂದ
ಜೊಂಡು ಹಾವಸೆಮೇಲೆ ಬೀಸಿ ಬಹ ತಂಬೆಲರ
ತನಿಗಂಧವಿನಿದು.
(ಜಲದೊಳಗೆ ಹುಟ್ಟೆಳಿದು ಏಳ್ವ ದನಿ ಇನಿದು.)

ನಾವಿಡುವ ಮಾಟು ಬಲುಮೆಲುಪಾದೊಡೇನು
ನೆಲವ ಬಿಟ್ಟವರಿಂಗೆ ನೆಲೆಯ ಪಾಡೇನು?
ಬಾನುನೀರೊಂದಾಗಿ
ದೋಣಿ ಬಯಲೊಳು ತೂಗಿ
ತೇಲುತಿರಲಿಂತೆಯೇ ಮುಗಿಲ ಮಾನಂತೆಯೇ
ತನಗೆ ತಾನು—
(ನಾವಿಡುವ ಮಾಟು ಬಲುಮೆಲುಪಾದೊಡೇನು?)

ಬೇರೆ ಲೋಕದ ಹಸನು ಹೊಗರ ತಳೆದಂತೆ
ತೋರುತಿಹುದಾ ತೀರ ದೂರ ಸರಿದಂತೆ.
ರಂಗಿನೆಲೆಗುಂಪಿನೊಳು
ಇಣಿಕುತಿರೆ ಹಿರಿಹೊಳಲು
ಸುತ್ತ ಹಬ್ಬಿದ ಹಳುವು ಕಣ್ಣಾಯ್ತು ಮಂಗಳವು
ಬೆಸಲೆಯಂತೆ—
(ಬೇರೆ ಲೋಕದ ಹಸನು ಹೊಗರ ತಳೆದಂತೆ.)

ತನುವೊಳಗೆ ರೂವಡೆವ ಹಲವಾಸೆಯಂತೆ
ದೋಣಿಯೊಳು ಕುಳಿತೆವಲ ಇಂದು ನಾವಿಂತೆ—
ಮೋದವೇ ಮುಂದಾಗಿ
ಮೋದದೊಳಗೊಂದಾಗಿ

ತೇಲುತಿರುವೆವು ನಾವು—ಸುತ್ತುವರಿದಿರೆ ಸಾವು
ಕೆರೆಯ ಜಲದಂತೆ—
(ತನುವೊಳಗೆ ರೂವಡೆವ ಹಲವಾಸೆಯಂತೆ.)

ಮೃದುವಾಗಿ ಕಿರುದೆರೆಗಳೆಮ್ಮ ಕೈ ಸೋಕೆ
ಮನಕೆನಿಪುದೆಳೆವಂತೆ ಜಲಕನ್ಯೆ ಜೋಕೆ—
ನಮ್ಮ ನೆಳಲೇ ನಮ್ಮ-
ನಣಕಿಸುತ್ತಿಹವಮ್ಮ!
ಹರಿಗೋಲು ಹುರುಳಾಗೆ ಈ ಮರುಳೆ ಹಿತವಾಯ್ತು
ಅಹಾ—ನಮ್ಮ ಮನಕೆ
(ಮೃದುವಾಗಿ ಕಿರುದೆರೆಗಳೆಮ್ಮ ಕೈ ಸೋಕೆ.)

(ದ್ವೀಪದ ದಡ ಸಮೀಪವಾಗುತ್ತದೆ.)

ಹುಟ್ಟಾಡುವಾಯಸಕೆ ರಂಗೇರುವಬಲೆ
ಹನಿಮುತ್ತು ಬಾಸಿಗದ ಸಿರಿಕುರುಳಿನವಳೆ
ಮುಗಿಲ ನೋಡುವ ಚೆನ್ನೆ
ನೀನಾರ ಮನದನ್ನೆ ?
ನೀ ನೆನೆವ ಸುರನಿಳಿದು ಕಳುವನೆಂದೆಣಿಸುವೆಯಾ
ನಿನ್ನ ದೋಣಿಯೊಳೆ ?
(ಹುಟ್ಟಾಡುವಾಯಸಕೆ ರಂಗೇರುವಬಲೆ !)

[ಹುಟ್ಟನ್ನು ಕೆಳಗಿಟ್ಟು ಸುಂದರ ಕನ್ಯೆ ನಗು ನಗುತ್ತಾ ಅರ್ಧ ಹುರುಳ ಅರ್ಧ ಹುಸಿಯ ಭಾವದಲ್ಲಿ ಹಾಡಲು ಪ್ರಾರಂಭಿಸುತ್ತಾಳೆ. ದೋಣಿ ದಡಕ್ಕೆ ನಿಲ್ಲುತ್ತಿರುತ್ತದೆ.]

ನವತರುಣಿ

ನನ್ನೊಲುಮೆ ನನ್ನೊಲುಮೆ
ಹಾರಿತು ಹಾ ಬನಕೆ
ರೆಕ್ಕೆ ತುಂಬಿತೆಂದೋ ಕಾಣೆ
ಬಾರದು ಹಾ ಮನಕೆ—

ದೋಣಿಯ ಬಿಸದ

(ದೋಣಿಯಿಂದ ಇಳಿಯುತ್ತಾ ಕರೆಯಲ್ಲಿ ನಡೆಯುತ್ತಾ)

ಮುಂಜಾವದ ಹುಲುಗನಸು
ಸಂಜೆಗಾಯಿತದೆ ಹುಲುಸು
ದಿನದಿಂ ದಿನದಿಂ ದಿನಕೆ
ಬೆಳೆಯುತ್ತ್ರದು ತಂತನಕೆ
ಹಾರಿತು ಹಾ ಬನಕೆ
ಆಯ್ತಿತು ಹಾ ಅರಕೆ–
(ನನ್ನೊಲುಮೆ......)

ರೂಪರೇಖೆ ನಾ ಕಾಣೆ
ಅದ ಬಲ್ಲವಳಾವ ಜಾಣೆ
ಇಂಥದು ಇಂಥದು ಎಂದು
ನಾ ಗುರುತರಿಯುವ ಮುಂದು
ಹಾರಿತು ಹಾ ಬನಕೆ
ತೋರದು ಹಾ ಮನಕೆ–
(ನನ್ನೊಲುಮೆ......)

ಪಂಚಪ್ರಾಣವಾಗೆ ಶ್ರುತಿ
ಹೊಂದಿಕೊಂಡಿತದರ ರುತಿ
ದೆಸೆಯಿಂ ದೆಸೆಯಿಂ ದೆಸೆಗೆ
ಮೊಳಗಿಡುತೀ ದನಿಯೊಸಗೆ
ನುಸುಳಿತು ಹಾ ಬನಕೆ
ಮಸುಳದು ಹಾ ಮನಕೆ–
(ನನ್ನೊಲುಮೆ......)

**ಗೆಳತಿಯೊಬ್ಬಳು**

**(ಅದೇ ನಗುಭಾವದಿಂದ)**

ನಿನ್ನೀ ಬಯಕೆಯ ಪಕ್ಕಿ
ಜಗದೊಳಾರ ಬಲೆಗೆ ಸಿಕ್ಕಿ
ಕರೆಯುತಿಹುದೊ ಬಿಡುಗಡೆಗೆ
ನಿನ್ನ ಬಾಳ ನಿಲುಕಡೆಗೆ
ತೋರದು ಹಾ ಮನಕೆ
ಇದೆ ಹಾ ಹಂಬಲಿಕೆ–
(ನಿನ್ನೊಲುಮೆ......)

**ಮತ್ತೆ ಕೆಲವರು**

**(ಒಬ್ಬೊಬ್ಬರು ಒಂದೊಂದು ಚರಣದಂತೆ)**

ಜವ್ವನಿಗರಿಗಿಲ್ಲ ಕೊರತೆ ನಮ್ಮ ನಾಡೊಳು
ಒಲವನರಸಿ ತಿರಿವೆ ಏಕೆ ಇಂತು ಕಾಡೊಳು
ಇವನೇ ಇವನೇ ಅವನೇ

**ತರುಣಿ**

ಬಿಡು ಬಿಡು ಸಖಿ ಇರು ಸುಮನೇ–

**ತರುಣರು**

ಹಾರಲೆ ನಾ ಜಲಕೆ
ತೂರಲೆ ನಾ ಬನಕೆ–
(ನಿನ್ನೊಲುಮೆ......)

**ಹಿರಿಯ ತರುಣಿ**

ಬಿಡಿ ಬಿಡಿ ಸಾಕೀ ಬಿನದವ ಜತೆ ಜತೆ ಸೇರಿ
ಕನಸ ಮರೆದು ನನಸ ಸವಿವ ಮುದಕಿದುವೇ ದಾರಿ.
ಮುಗಿಲಿಂ ಮುಗಿಲಿಂ ಮುಗಿಲಿಗೆ
ಸಂಜೆ ಮೆಲ್ಲನಡಿಯಿಡುತ

ದೋಣಿಯು ಬಿನದ

ಬಾನಂ ಮಲರಿಸಿ ನಡೆವಳು
ಬಂದಳಿರುಳು ಇಗೊ ಎನುತ.
ಬನ್ನಿ ಸಖೀ ಬನಕೆ–
(ಬನ್ನಿ ಸಖೀ ಬನಕೆ–)

ನವತರುಣಿ

ಹೋಗಿ ಸಖೀ ಹೋಗಿ ಸಖೀ
ಹೋಗಿರಿ ನಿಂ ನಿಂ ಮುದಕೆ
ತರಲಿ ಸಂಜೆ ನನಗೆ ಕನಸ
ಮಿಾಸಲಪ್ಪೆ ನಾನದಕೆ–

ತರುಣ

ಆದೊಡೆ ಈ ಕಲಕಂಠಿ
ಅಪ್ಪಳಲಾ ಒಂಟಿ–

ನವತರುಣಿ

ಒಂಟಿ ಹೇಗೆ ಕನಸಿರಲು
ಬಳಿಗೆ ನಿಮ್ಮ ಮನಸಿರಲು !

(ಶಿಲಾತಲದ ಹತ್ತಿರ)

ಈ ವೇದಿಕೆಯೊಳು ಕುಳಿತು
ಬಿಡುವಾನುವುದೆನಗೊಳಿತು
ಹೋಗಿ ಸಖೀ ಬನಕೆ
(ಹೋಗಿ ಸಖೀ ಬನಕೆ—)

ತರುಣ ತರುಣಿಯುರು

(ಒಬ್ಬೊಬ್ಬರು ಒಂದೊಂದು ಚರಣದಂತೆ)

ಆಗಲಿಂತೆ ಕುಳ್ಳಿರಿಲ್ಲಿ–
ಬನದ ತಾಯ ಮಡಿಲಿನಲ್ಲಿ–

ದೋಣಿಯ ಬಿನದ

ತಾಣ ಬಿಟ್ಟು ಅಲುಗದಿರು
ಕನಸೊಳಲೆದು ಮಲಗದಿರು
ದನಿ ಸನಿಯಕೆ ಇಹೆವಾವು
ಹಿತವಾಗಲಿ ಈ ಠಾವು.

(ಬನ್ನಿ ಸಖೀ ಬನಕೆ—)

[ಅವರು ಉಪಾಹಾರ ಪಾನೀಯಾದಿಗಳನ್ನು ಇಟ್ಟು ಹೋಗುತ್ತಾರೆ. ಈಕೆ ಸಂಜೆಮುಗಿಲನ್ನು ನೋಡುತ್ತಾ ಒಳಗಿನ ಕನಸನ್ನು ಹೊರಗೆ ರೂಪಿಸಿಕೊಳ್ಳುವಂತೆ ಸುತ್ತಾಡುತ್ತಾ ಹಾಡುತ್ತಾಳೆ. ಚುಕ್ಕಿ ಮೂಡುತ್ತಿರುತ್ತದೆ.]

ನವತರುಣಿ

ನಾನೂ ಮತ್ತೆನ್ನ ಕನಸು–ಒಡನಾಡಿಗ-
ಳಾನೂ ಮತ್ತೆನ್ನ ಕನಸು–
ಎಡರಿಲ್ಲದೆ ಬಿಡುವಿಲ್ಲದೆ ಬೆರೆತವ-
ರಾನೂ ಮತ್ತೆನ್ನ ಕನಸು–

ಮರದಿ ಅಲೆದು ತೆಳುಗಾಳಿ ಬೀಸುತಿರೆ
ನೀಲಗಗನದೊಳು ಮೋಡ ಚೆಲ್ಲಿರೆ
ಮೊಗ್ಗು ಬಿರಿದು ನರುಗಂಪ ಸೂಸುತಿರೆ
ಜಗವೆ ಜಾರಿ ಕನಸೆನ್ನ ಕೊಳ್ಳುವುದು

(ನಾನೂ......)

ತಿರೆಯ ಮಿಗುವ ತೆರ ಬಾಳು ಬೆಳೆದೊಲು
ಅಮಮ ನನಗೆನಿಪುದೊಮ್ಮೆಗೊಮ್ಮೆಗೆ
ಇಂಬೆ ತಪ್ಪಿದೊಲು ನಾನು ಬೆದರಿರಲ್
ಕನಸೆ ನೆರವಾಯ್ತು ಬಾಳಿನಿಂಬಿಗೆ

(ನಾನೂ......)

ಮಲರ ತಳಿದಂತೆ ಕಲ್ಪವೃಕ್ಷವು
  ಅರಿಲ ಸೂಡುತಿದೆ ಅಂತರಿಕ್ಷವು
ಇದರ ತಲದಿ ನಾ ನೆರೆವೆನೀ ದಿನ
  ರೂಪವೆಂತೊ ಹೆಸರೇನೋ ಇನಿಯನ
(ನಾನೂ......)

[ಈಗ ಆಕೆ ಜೊಂಡಿನ ನಡುವೆ ಬಿದ್ದಿರುವ ಮನುಷ್ಯನನ್ನು ನೋಡುತ್ತಾಳೆ. ಹಾ ಎಂದು ಚೀರುವುದಕ್ಕೆ ಯತ್ನಿಸುತ್ತಾಳೆ. ಭಯದಿಂದ ಧ್ವನಿ ಹೊರಡದು. ಮನುಷ್ಯ ಸ್ವಲ್ಪ ಹೊರಳಿ ನರಳುತ್ತಾನೆ. ದಿಟ್ಟ ಹುಡುಗಿಯಾದುದರಿಂದ ಜೀವಂತನೆಂದು ತಿಳಿದು ಹತ್ತಿರಕ್ಕೆ ಹೋಗಿ ಅತನನ್ನು ಜೊಂಡಿನಿಂದ ಮೇಲಕ್ಕೆ ಎಳೆದುತಂದು ಮಲಗಿಸಿ ಸಂದರ್ಭಕ್ಕೆ ತಕ್ಕಂತೆ ತನ್ನ ದೋಣಿಯಲ್ಲಿ ಕೆಳೆಯರು ಬಿಟ್ಟಿರುವ ಶಾಲು ಅಂಗಿ ಮೊದಲಾದ ವಸ್ತ್ರಗಳಿಂದಲೂ ಪಾನೀಯದಿಂದಲೂ ಉಪಚರಿಸುತ್ತಾಳೆ. ಆತ ಪ್ರಾಣಜ್ಞಾನಸಂಪನ್ನನಾಗುತ್ತಾನೆ. ಈ ಕ್ರಿಯೆಗಳನ್ನು ಆಯಾ ನಟರು ತಮತಮಗೆ ಸೂಕ್ತವಾದಂತೆ ತಕ್ಕ ನರ್ತನಾಭಿನಯಗಳಿಂದ ನಿರ್ವಹಿಸಬಹುದು.]

ಎಚ್ಚತ್ತ ಮನುಷ್ಯ

(ಮಲಗಿರುವಂತೆಯೇ ದೃಷ್ಟಿಯೆತ್ತಿ ತರುಣಿಯನ್ನು ನೋಡಿ)

ಸಾವಿನ ಗವಿಯಿಂ ಪಾರಾಗಿ
ದಿವಕ್ಕೈತಂದೆನೆ ನೇರಾಗಿ
ನೀನಾವಪ್ಸರೆ ಓ ರಮಣೀ
  ನನ್ನೇಪುಣ್ಯದ ಬೆಳಸೌ ?

ನವತರುಣಿ

ನುಡಿವಂತಾದೆಯ ಮಾನವ !
ತುಸ ಕುಡಿ ಈ ಪಾನೀಯವ.

ತರುಣ

ಸುಲಿಪಲ್ಲೊಳು ನಗೆಬೆಳುದಿಂಗಳ್
ಸವಿಸೊಲ್ಲೊಳು ಸಕಲ ಮುದಂಗಳ್
ಕಲ್ಪವಲ್ಲರಿಯೆ ಸೊದೆಯೆರೆವಂತೆ–
ಅಸುವುದ್ದೀಪಿಸಿ ಆರೌ ನಿಂತೆ ?

**ನವತರುಣಿ**

ಸಾವಗಿದುಗಿದೆಲೆ ಮನುಜಾ
ನಿನಗಿಂತೀ ಭ್ರಮೆ ಸಹಜ.
ಬಾನಲ್ಲಿದು ಬರಿಯ ತಿರೆ
ಅಗೊ ನೀ ಬಿದ್ದಿದ್ದ ಕರೆ!

**ತರುಣ**

ಹಾ, ಸತ್ಯ, ಅದೆ ತಾಣ ಅದೆ ನನ್ನ ದೋಣಿ
ತಿರುಗಿ ತಿರೆ ಬಾಳಾಯ್ತು—ವಿಧಿಯೆ ನಿಷ್ಕರುಣಿ.
ನಾ ಬಾಳಲಾರೆನೀ ಕೀಳ್ಬಾಳನು
ನಲವರತ ಬೀಳ್ಬದುಕ ನಾ ತಾಳೆನು!

(ತಿರುಗಿ ಎದ್ದು ಸಾಯಲು ಹೋಗುವುದಕ್ಕೆ ಯತ್ನಿಸುವನು. ನವತರುಣಿ ಸ್ವಲ್ಪ ಜೋರಾಗಿಯೇ ತಡೆದು ಮಲಗಿಸುವಳು.)

**ತರುಣಿ**

ಬಿದ್ದಿರಿಲ್ಲಿ ಬಡಮಾನವ ಹುಚ್ಚಾಟವು ಸಾಕು.

**ತರುಣ**

ನನ್ನಂಥವರೀ ತಿರೆಯೊಳಗೇಕಿರಬೇಕು?

**ತರುಣಿ**

ತಿರೆಗೇ ನೀ ಹೊರೆಯಾದೊಡೆ ಹಗುರಾರಿಗೆ ನೀನು?

**ತರುಣ**

ದಿಟದಿಟ ನಾಕಕು ನರಕಕು ಬೇಡದ ಹೊರೆ ನಾನು.

**ತರುಣಿ**

(ಮರುಕದಿಂದ)

ಬಡಮಾನವ, ಕೋ ಇದಕೋ—ಈ ಹಣ್ಣನು ಮೆಲ್ಲು.

ತರುಣ

(ಮೆಲ್ಲುತ್ತಾ)

ಹರಣಕೆ ಮೆರುಗಿಡುತಿದೆಯೌ ನಿನ್ನೀ ಸವಿಸೊಲ್ಲು.

ತರುಣಿ

(ಕಾಫಿಯನ್ನು ಕೊಡುತ್ತಾ)

ಎಲೆ ಮರುಳೇ ನೀನೀ ತೆರ ಬಾಳೇತಕೆ ಬಿಸುಟೆ?

ತರುಣ

(ಸುಯ್ಯುತ್ತಾ)

ಬೆಸಗೊಳ್ಳದೆ ಇರು ಕೆಳದಿ ಅದೆ ದಿಟ ಇದುವೆ ಸಟೆ.

ತರುಣಿ

ಹಣವನು ನೀಗಿದೆಯಾ?
ಇನಿಯರನಗಲಿದೆಯಾ?
ಮಕ್ಕಳು ಮಡದಿಯರಿಹರೆ?
ಹದಗೆಟ್ಟಿತೆ ಜೀವ?
ಮತ್ತೇಕಪ್ಪಿದೆ ಸಾವ?

(ಪ್ರಶ್ನೆಗೆಲ್ಲ ತರುಣ ಉಹು ಎಂದು ಸಂಜ್ಞೆಮಾಡುವನು.)

ತರುಣ

(ನಿಡುಸುಯ್ಯುತ್ತಾ ದೆಸೆ ದೆಸೆ ನೋಡುತ್ತಾ)

ಕಣ್ಣಾರಳಿಸಿ ನಾ ನೋಡಿದೆ
ಈ ಲೋಕವನೆಲ್ಲ
ಆದೊಡೆ ನನ್ನನು ಕಂಡವರೇ ಇಲ್ಲ—
ಕಿವಿಗೊಟ್ಟಾಲಿಸಿ ಕೇಳಿದೆ
ಈ ಲೋಕದ ಸೊಲ್ಲ
ಆದೊಡೆ ಕಿವಿಗೊಟ್ಟವರೆನಗೊಬ್ಬರು ಇಲ್ಲ.

**ದೋಣಿಯ ಬಿನದ**

ಎನ್ನಳಲಿಗೆ ನಿಡುಸುಯ್ಯಲು
ನಲವೊಳು ನಗಲು
ನಾನೇ ತಾನಾದೆನು ಬೇರಾರಿಲ್ಲದೆ
ಹೊಳಲಿಡಲು–
ನಾನಿಹೆನೆಂಬುದನರಿಯಿಸೆ
ನನ್ನುಳಿದಿನ್ನಾರೂ–
ನನ್ನಾಸೆ–ಹಸಿವು–ಬಯಕೆ–ಇಲ್ಲವು ಮತ್ತಾರೂ–
ಇಂತಾಯಿತು ಬಾಳು ಹುಸಿ
ಸಾವೇ ದಿಟವೆನಿಸಿ.
ನಾನದಕೀ ಕೆರೆಯಾಳಕ್ಕೆ
ಸಾವಿನ ಕಾಳಕ್ಕೆ
ಧುಮುಕಿದೆನಿರವಿನ ಹುಸಿಯಂ ಹುಸಿಮಾಡೆ–
ಸಾವನೆ ದಿಟಮಾಡೆ.

**ತರುಣಿ**

(ನಗುತ್ತಾ)
ಸಾವೂ ಬೇಡದೆ ಬಿಸುಡಿದ
ಬದುಕಿನ ಬಡಜಂತು,
ನಿನ್ನಯ ಮುಂದೆಂತು ?

**ತರುಣ**

ನಗದಿರು ನಗದಿರು ಜಾಣೆ,
ಇದನಳಿಯುವ ಬಗೆ ಕಾಣೆ.

ತರುಣಿ

(ಅದೇ ನಗು ಭಾವದಲ್ಲಿ)

ಹಿಂಬದಿ ಭಟರಟ್ಟುತಿರೆ
ಕಳ್ಳನು ಎಂತು
ಕದ್ದಿಹ ಹೊನ್ನನು ಕಳೆಯುಲು
ಹವಣಿಪನಂತು—
ಬಾಳಿನ ಹೊಣೆಹೊತ್ತು
ನೀ ಬೇಡುವೆ ಮುತ್ತು !

ತರುಣ

ದಿಟ, ನೀನೊರೆದುದು, ದಿಟವೌ
ನಾಚಿಕೆಗೇಡಿರವು
ವಿಧಿಯಂ ವಂಚಿಸುತೀ ತೆರ
ನಾ ಬದುಕಿಹ ತೆರವು !

ತರುಣಿ

ಹುಸಿಯಾಡುವೆ ಬಡಮಾನವ
ನಾನಿದ ನಿನಗಿತ್ತೆ.
ನೀನೆನ್ನವ—ಎನಗಾಗಿಯೆ
ಬಾಳಿದ ಹೊರು ಮತ್ತೆ.

ತರುಣ

(ಆಶ್ಚರ್ಯದಿಂದ)

ನಿನ್ನವನೇ ನಾ !

ತರುಣಿ

ಮತ್ತಾರವ ನೀನು ?

ತರುಣ

ಹ್ಞ !!

ತರುಣಿ

'ನಿನ್ನೀ ಬಾಳನು ನಾ ಹೊತ್ತಿಸಿರೆ
ನನ್ನದಿದಲ್ಲದೆ ನಿನದೆನ್ನುವರೆ?
ತಲೆಯೆತ್ತೇಳೈ ಬಾ ಬಿಡು ಚಿಂತೆ
ಕಳೆದಾಯಿತು ಹಳೆಬಾಳಿನ ಬೊಂತೆ
ಎಳವೆರೆಯಿಂದಿನಿದಾಗಿಹುದಿರುಳು
ಅನುವಿಂದೆಲ್ಲರು ಸೊಗದಿಂದಿರಲು
ಇಳೆ ಬಾನೆರಡೂ ಒಪ್ಪಿರುವಂದ
ನೀ ಕೀಳ್ಮೊಗನಾಗಿರಲೇ ಚೆಂದ?

(ಆತ ಬೆರಗುಗೊಂಡವನಂತೆ ಆಕೆಯುನ್ನು ಸಂತೋಷಾಶ್ಚರ್ಯದಿಂದ ನಿಟ್ಟಿಸುತ್ತಾನೆ.)

ಬಾ ಬಾ ಏಳೈ. ಏಕೀ ತೆರದೊಳು
ನನ್ನನೆ ದಿಟ್ಟಿಸುವೆ
ಭೂತವೆ ಪ್ರೇತವೆ ನಾ ಸೋಜಿಗವೇ
ಏತಕೆ ನಿಟ್ಟಿಸುವೆ?

(ಅವಳನ್ನು ನೋಡುತ್ತಾ ತನಗೆ ತಾನೇ ಹೇಳಿಕೊಳ್ಳುತ್ತಾ ಆವನು ಏಳುತ್ತಾನೆ.)

ತರುಣ

"ಎನ್ನವ ನೀನು—ನಿನ್ನವನಲ್ಲವು"
ಓ—ಚೆಲುವು ಚೆಲುವು ಚೆಲುವು!
ನಿನ್ನವ ನಾನು ನನ್ನವನಲ್ಲವು
ಓವೋ ಗೆಲವು ಗೆಲವು ಗೆಲವು!

(ಕುಣಿಯುವನು.)

### ದೋಣಿಯ ಬಿಸದ

ನೀ ಹೊಣೆಹೊತ್ತಿರೆ ನಾ ಹಗುರ
ನಲವಿನ ನೊರೆಯ ತೆರ.
ಓವೋ ಚೆಲುವೇ–ಬರಡು ಬಾಳಿಗೆ
ಹಿಗ್ಗಿನ ನೆರೆ ನುಗ್ಗಿ
ಆಯಿತು ಸುಗ್ಗಿ !
ಓವೋ ನಲವು ನಲವು ನಲವು !

### ತರುಣಿ

ಇನ್ನೇಗತಿ ಹುಚ್ಚಾದನು ಈತ
ಅರ್ಥವೆ ಇಲ್ಲದೆ ಆಡುತ ಮಾತ.
ನೀನೇಕೀ ತೆರ ಕುಣಿಯುತ್ತಿಹೆಯೋ
ಉನ್ಮತ್ತನ ತೆರದೆ ?
ಒಲವೆನ್ನುತ ಚೆಲುವೆನ್ನುತ ಚೀರಲು
ಬೇವಸವಪ್ಪುದು ಬರಿದೆ.

### ತರುಣ

ಎನ್ನವ ನೀನೆನ್ನುತಿರೆ
ಹಗುರಾಗಲು ನಿಂತ ತಿರೆ
ಸವಿಮಾತಿನ ಸೊದೆ ಕುಡಿದು
ಸುರನಂತೆಯೆ ನಾ ಕುಣಿದು
ನಿನ್ನವನೆಂದೇ ಉಲಿವೆ
ಒಲವೇ ಎನ್ನುತ ಕರೆವೆ
ಎನ್ನವಳಪ್ಪಿಯ ಚೆಲುವೆ
ಎನ್ನುತ ನಾನೆರೆವೆ !

**ತರುಣಿ**

(ಹುಸಿ ಕೋಪದಿಂದ)

ನಿನ್ನ ತಲೆಗೆ ಪಿತ್ತವೇರಿ ಬುದ್ಧಿಗೆಟ್ಟದೆ
ಮಾತಿನಮಲು ದಿಟ್ಟತನದ ತುದಿಗೆ ಮುಟ್ಟದೆ.
ಕಂಡ ಹೆಣ್ಣ ಚೆಲುವೆ ಎಂದು
ನೋಡದೆಯೇ ಹಿಂದು ಮುಂದು
ಒಲುಮೆಮಾತನು
ನಾಣಬಿಟ್ಟು ನುಡಿಯುತಿರುವೆ
ಎಂಥ ಧೂರ್ತನು!

**ತರುಣ**

ಏತಕಿಂತು ಒಗಟನುಲಿವೆ
ಅರ್ಥವಾಗದೆನಗೆ ಚೆಲುವೆ
ನನ್ನ ಬಾಳು ನಿನ್ನದೆಂದೆ
ಅದನೆ ನಾನು ನನ್ನಿ ಎಂದೆ
ತಪ್ಪು ಏನಿದೆ?

**ತರುಣಿ**

ಕಾಲ ಪಾದರಕ್ಷೆಯಂತೆ
ಕೈಯಲಿರುವ ಛತ್ರಿಯಂತೆ
ಮನೆಯ ನಮ್ಮ ಟೈಗರಂತೆ
ನನ್ನವ ನೀ ಎಂದೆನು.

**ತರುಣ**

ಪಾದುಕೆಯೊಲು ಕಾಲ ಹಿಡಿವೆ
ಕೊಡೆಯ ತೆರದಿ ಕೈಯ ಹಿಡಿವೆ
ಟೈಗರಂತೆ ನಿನ್ನ ಬಿಡದೆ
ಹಿಂಬಾಲಿಸಿ ಬರುವೆನು.

**ತರುಣಿ**

ಮರುಳತನವ ಸಾಕುಮಾಡು
ಮುಂದೆ ನಿನ್ನ ಹಾದಿನೋಡು.
ದನಿಯ ಸನಿಯದಲ್ಲಿ ಇಹರು
ನಂಟರಿಷ್ಟರು—
ನಾ ಕೂಗಲು ನಿನ್ನ ಬಿಡರು
ಬಹಳ ದುಷ್ಟರು.

**ತರುಣ**

(ಖಿನ್ನನಾಗಿ)

ನಿನಗು ನಾನು ಬೇಡವಾದೆ
ಏಕೆ ಸಾವಿನಿಂದ ಕಾದೆ?—
ತಿರುಗಿ ಕಾಳವಾಯ್ತು ಜಗ
ಮಂಜು ಮಾಯವಾಯ್ತು ಸೊಗ!

**ತರುಣಿ**

ಬಡಮಾನವ!

**ತರುಣ**

ಎಳಬೆಳುದಿಂಗಳ ತಂಪನ್ನು
ನೈದಿಲೆ ಕಂಪನ್ನು
ಕಿರುತಾರಗೆಗಳ ಮಿರುಗನ್ನು
ಇರುಳಿನ ಬೆರಗನ್ನು
ನನ್ನಾತ್ಮದ ಮೆರುಗನ್ನು
ನಂದಿಸಿ ತಂದೆಯಾ ಕೊರಗನ್ನು.

**ತರುಣಿ**

ಬಡಮನುಜಾ!

**ತರುಣ**

ನಿನಗೋ ನಿನ್ನವರುಂಟು
ಸಾವಿಗು ನನಗೂ ನಂಟು
ತೆರಳೆಲೆ ತೆರಳೆಲೆ ಚೆಲುವೆ
ಜಲದೆದೆಯನು ನಾ ಹೊಗುವೆ

**ತರುಣಿ**

ಮರುಳು ಮನುಜ
ನಾನಿಲ್ಲದೆ ಜೀವಿಸೆಯಾ?

**ತರುಣ**

(ಆಸೆಯಿಂದ)

ನೀನೆ ನನ್ನ ಉಸಿರು ಪ್ರಾಣ
ನನ್ನ ಬಾಳಗೊಡುವ ತ್ರಾಣ
ನೀನೆ ನನ್ನ ಕಣ್ಣ ಬೆಳಕು
ಕಿವಿಯಿಂಚರ ಸೊಗದ ತುಳುಕು
ನಿನಗಂಟಿದೆ ನನ್ನ ಹರಣ
ನೀ ಕೈಬಿಡಲಹುದು ಮರಣ.

**ತರುಣಿ**

ಸಾಕು ನಿನ್ನ ಮರುಳುಮಾತು
ಒಲಿಯೆನು ನಾನಿದಕೆ ಸೋತು.
(ಸ್ವಲ್ಪಹೊತ್ತು ಅತ್ತಿತ್ತ ತಿರುಗಾಡುತ್ತಾ ಅತನನ್ನು ನೋಡದೆಯೆ)
ನಿನ್ನನಿನಿಯ ಎನ್ನಲಾರೆ–
ಊಹು.
ಆದೊಡಂಜೆ ನಿನ್ನ ಸಾರೆ–

*   *   *

ನಿನ್ನಿನಿತೂ ತಿಳಿಯದೆನಗೆ–

ದೋಣಿಯ ವಿನದ

(ಥಟ್ಟನೆ ಉತ್ಸಾಹದಿಂದ ಆತನನ್ನು ನೋಡಿ)

ಈ ಸಾಹಸಕೊಲಿವುದು ಬಗೆ.
ಬಾರ ಬಾ–ತರಣಿಯಲ್ಲಿ ಕುಳಿತು ತೇಲುವ
ವಿಧಿಯ ನಗೆಯ ಜೋಲುಮಂಚ-
ದಲ್ಲಿ ನಾವು ಜೋಲುವ.

(ತಿರುಗಿ ಆಶ್ಚರ್ಯದಿಂದ ಸ್ತಬ್ಧನಾದ ಮನುಷ್ಯನನ್ನು ಕೈಹಿಡಿದೆಳೆಯುತ್ತಾ)

ಬಾ ಬಾ ಜಗ ನಗಲಿ
ಸೊಗ ಮಿಗಲಿ
ಬಾ ಬಾ.

[ಅವರು ದೋಣಿಯ ಹತ್ತಿರ ಹೋಗಿ ಕುಳಿತುಕೊಳ್ಳುವಾಗ ಗೆಳೆಯರು ಬರುತ್ತಾರೆ.]

ಒಬ್ಬ ಗೆಳೆಯ

ಓ ವೋ ವೋ ನೇಹಿಗರೇ
ಸರಸಳ ನೋಡಿ–
ಅವನಾವನೊ ನಾ ಕಾಣೆನು
ನಡೆವಳು ಜತೆಗೂಡಿ–
ಇನಿಯಳ ತೆರ ನೋಡುವಂ
ಸರಸವಾಡುವಂ
ಅವಳ ಹಿಂದೆ ದೋಣಿಯೇರಿ
ಹುಟ್ಟ ಜಲಕೆ ದೂಡುವಂ.

ಹಿರಿಯ ತರುಣಿ

ಓ ಸರಸೂ ಸರಸ ಸಾಕು
ಬಾ ಬಾ ನಮ್ಮತ್ತ
ಹೆರವರ ಜತೆ ದೋಣಿಯಾಟ
ಸಾಕು ನೋಡು ಹೊತ್ತ.

## ದೋಣಿಯ ಬಿನದ

[ನವತರುಣಿ ದೋಣಿಯಲ್ಲಿ ಕುಳಿತು ಹಾಡುತ್ತಾಳೆ. ತರುಣ ಹುಟ್ಟು ಹಾಕುತ್ತಾನೆ— ದೋಣಿ ಕರೆ ಬಿಡುತ್ತದೆ. ಜಲಕನ್ಯೆಯರು ತೋರಿಬಂದು ಅಲೆಯಂತೆ ದೋಣಿಯನ್ನು ಹೊತ್ತು ಒಯ್ಯುತ್ತಾರೆ.]

**ನವತರುಣಿ**

ತೇಲುವೆ ನಾ—ನೇಹಿಗರೇ
ಹೊಸ ಗೆಳೆಯನ ಕೂಡೀ
ರೂಢಿಯ ಮರೆದು ಸಾಹಸಕೊಲಿದು
ಮುದವ ಮುಂದುಮಾಡೀ !

**ಜಲಕನ್ಯೆಯರು**

ಮುದವ ಮುಂದುಮಾಡೀ—

**ನವತರುಣಿ**

ಪಡುವಣ ತೀರಕೆ ತೇಲುವ ಚಂದ್ರನ
ದೋಣಿಯನನುಸರಿಸಿ—
ಮನೆಯಂ ಮರೆದು ತಿರೆಯನೆ ತೊರೆದು
ಬಿಡುಗಡೆಯನೆ ಹರಸಿ.

**ಜಲಕನ್ಯೆಯರು**

ಬಿಡುಗಡೆಯನೆ ಹರಸಿ—

**ನವತರುಣಿ**

ತಿರೆಯೇರುತ ಮುಗಿಲಿಳಿಯುತ ದೂರದಿ
ನೋಟಕೆ ಲೇಸಾಗಿ—
ಬೆರೆಯುವಲ್ಲಿಗೇ ದಿಗಿಲನಳಿಯುತ
ನಡೆವೆವು ಬೇಸಾಗಿ—

**ಜಲಕನ್ಯೆಯರು**

ನಡೆವೆವು ಬೇಸಾಗಿ—

ದೋಣಿಯ ಬಿನದ

ಗೆಳೆಯರು

ತಾಳು ಸಖೀ ನಿಲ್ಲು ಸಖೀ
  ಸಾಹಸವಿದು ಸಾಕು.
ದೋಣಿಯಿಳಿದು ಬಾ ನಿನ್ನೀ ಬಿನದಕೆ
  ನಾವೇನೆನಬೇಕು !

ನವತರುಣಿ

ಕಿವಿ ಹೊಗದೈ ಬಗೆ ಹೊಗದಾ
  ಈ ದೂರಿನ ಮಾತು–

ಜಲಕನ್ಯೆಯರು

ಈ ದೂರದ ಮಾತು–

ನವತರುಣ ತರುಣಿಯರು
(ಇಬ್ಬರೂ)

ನಾವದೃಷ್ಟಕೆ ಕಾಣದಿಷ್ಟಕೆ
  ತೇಲಿ ನಡೆವೆವೋತು–

ಜಲಕನ್ಯೆಯರು

ತೇಲಿ ನಡೆವೆವೋತು—

ತರುಣ

ಎಲರೆನುವುದು ಇದೆ ಇದೆ ಸೈ ಎಂದು.

ತರುಣಿ

ತಾರಗೆ ಕಣ್ಮಿಡಿವುದು ಲೇಸೆಂದು.

ಜಲಕನ್ಯೆಯರು

ಕೈದೀವಿಗೆಯೊಲು ಚಂದಿರ ಮುಂದಾಗೆ
ಹೂವಿಗು ಹಗುರೆನಲೀ ತರಣಿಯು ಸಾಗೆ.

ದೋಣಿಯ ಬಿನದ.

ತರುಣಿ

ಆ ಕರೆ ಕರೆಯೆ

ತರುಣ

ನಲಿದೆದೆ ತೆರೆಯೆ

ತರುಣ ತರುಣಿ ಜಲಕನ್ನೆಯರು

(ಎಲ್ಲರೂ)

ತೇಲಿ ನಡೆವೆವ್ವೋತು.

ನೇಹಿಗರೇ ಸಾಗುವೆವೌ
ಆ ದೂರದ ಕರೆಗೇ—
ಭಯವಳಿದೊಲಿದೆದೆಯೊಳು ಮುದವಾನುತ
ನಲ್ ಕನಸಿನ ತೆರೆಗೆ!

(ಕ್ಷೀಣವಾಗಿ)

ನಲ್ ಕನಸಿನ ತೆರೆಗೆ!

[ದೋಣಿ ಮರೆಯಾಗುತ್ತದೆ.]

ನೇಹಿಗರು

ಸಾಗಿದರೈ ಸಾಗಿದರೌ
ಆ ದೂರದ ಕರೆಗೇ
ಭಯವುಳಿದೊಲಿದೆದೆಯೊಳು ಮುದವಾನುತ
ನಡೆದರು ಕಣ್ಮರೆಗೇ.

ಒಬ್ಬೊಬ್ಬರೂ

ಸೋಜಿಗವಿವರೀ ಬೇಟ
ಅಂಜಿಕೆಯುಳಿದೀ ಕೂಟ
ಛೀ, ಬಿಡು, ಬೇಸರವೆಮ್ಮಾ ಬಾಳಾಟ
ಭಲೆ ಲೇಸಲ್ಲವೆ ಅವರೀ ಮಾಟ!

ದೋಣಿಯ ಬಿನದ

ಬಾರೈ

ಬಾರೌ

ತೇಲೋಣ

ಅವರಂತೆಯೆ ನಾವೂ ಸಾಗೋಣ.

ಎಲ್ಲರೂ

ನೇಹಿಗರೇ ನೇಹಿಗರೇ

ಆ ದೂರದ ಕರೆಗೇ

ಭಯವಳಿದೊಲಿದೆದೆಯೊಳು ಮುದವಾನುತ

ತಿರೆ ತೀರುವವರೆಗೇ—

(ವಾದ್ಯಮೇಳ ಕೊನೆಯ ಚರಣವನ್ನು ನಿಧಾನವಾಗಿ ನುಡಿಸಿ ಮುಗಿಸುತ್ತದೆ.)

ತಿರೆ ತೀರುವ ವರೆಗೆ!

ತೆರೆ

## ಪಾತ್ರಗಳು

ಕವಿ

ಕವಿಪತ್ನಿ

ಮುಂದಾಳು ಮತ್ತು ನೇಹಿಗರು

ಯಕ್ಷ

ಮಳೆ

ಬನದೇವಿ

ಹೊನಲರಾಣಿ

ಮಾರುತ

ಮಾನವ ತೇಜಸ್ಸು

ಚೆಲುವದೇವಿ

### ಸ್ಥಾನಗಳು:

ಬನಕ್ಕೆ ಹೋಗುವ ಬೀದಿ, ಬನ

### ಕಾಲ:

ಎಳಹಗಲು, ನಡುಹಗಲು

# ಕವಿ

**ಧ್ಯಾನಶ್ಲೋಕ**

ಒಂದು ಮೊಗದೊಳು ಚೆಲುವು
ಮತ್ತೊಂದರೊಳು ನಲವು—
ರಸಿಕರೊಲುಮೆಯು ಬಳಕೆಗೆಂಥ ನಾಣ್ಯ!
ಇದನು ಟಂಕಿಸುತಿರುವ ಕವಿಯೆ ಮಾನ್ಯ.
ನಮೋ ನಮೋ ಆತನಿಗೆ
ನಮೋ ರಸವಿಧಾತನಿಗೆ.

[ಕೆಲವು ಜನ ಹುಡುಗರು ಪ್ರವೇಶಿಸುತ್ತಾರೆ. ಒಬ್ಬೊಬ್ಬರು ಒಂದೊಂದು ನುಡಿಯನ್ನು ಹೇಳುತ್ತಾರೆ.]

**ಮುಂದಾಳು**

ಬಿಡುವು ಬಿಡುವು ಬಿಡುವು!
ವಿನೋದಕೇತಕೆ ತಡವು?
ಬನ್ನಿರಿ ಬನ್ನಿರಿ ನೇಹಿಗರೇ
ಮೋದದ ಹಾದಿಯ ದಾರಿಗರೇ.
ಹೊಳೆಯುತ್ತಿಹನೀ ಸೂರ್ಯ
ಮುಂದೇನೆಮ್ಮಯ ಕಾರ್ಯ?

**ಇನ್ನೊಬ್ಬ**

ಇದಿಗೋ ತುಂಬಿತು ಬುಟ್ಟಿ
ತಂದಿಹೆನೆಲ್ಲವ ಬಿಟ್ಟಿ
ಮನೆಗೂ ಮನೆಗೂ ಬೇಡಿ
ಅಜ್ಜಿಯರೆಲ್ಲರ ಕಾಡಿ.

ಮತ್ತೊಬ್ಬ

(ಪಂಕ್ತಿ)

ಭಲೆ ಭಲೆ ಭಲೆ ಭಲೆ
ಇಡ್ಡಲಿ ದೋಸೆ ಕೋಡುಬಳೆ
ತಪ್ಪಲೆತುಂಬ ಕಾಫಿ!
ನಿನಗಿದ ಹೊರುವುದು ಮಾಫಿ!

ಇನ್ನೊಬ್ಬ

ಮುಂದೇನೆಮ್ಮಯ ಕಾರ್ಯ
ಹೇಳಯ್ಯಾ ನೀ ಆಚಾರ್ಯ!

ಮುಂದಾಳು

ತಂದಿಹ ತಿರುಪೆಯನಲೆದುಂಡು
ಕಾಡೊಳು ಮೇಡೊಳು ಬೆವರ್ಗೊಂಡು
ಹೊಳೆಯೊಳಗೀಸಿ ಹೋ ಎಂದು
ನೆಳಲೊಳು ಹಾಸಿ ಹಾ ಎಂದು—

ಒಬ್ಬ

ಸಾಕು ಸಾಕು ಸಾಕಯ್ಯಾ ಬಂಧು
ಅಂದೂ ಇಂದೂ ಮುಂದೆಂದೂ.
ಈ ತೆರನೊಂದೇ ಒಂದೇ ತೆರದ
ಇಂತಲ್ಲದೆ ಬೇರಿಲ್ಲವೆ ಬಿನದ?

ಇನ್ನೊಬ್ಬ

ಎಂದಿಗು ಇವನದೆ ಗೋಳು
ಬೇರೊಂದಿದ್ದರೆ ಹೇಳು.

ಹುಡುಗರು

(ಒಬ್ಬೊಬ್ಬರು ಒಂದೊಂದು ಸಾಲನ್ನು ಹೇಳುವರು)

ಬಿಡುವಿಹುದೋ ಬಿದುರಿನ ಉದ್ಯಾನ
ದೊರೆವುದೊ ಕೆರೆಯೊಳು ದೋಣಿಯ ಯಾನ
ನಾಟಕಶಾಲೆಯೊಳೇನಿದೆ ಚಿತ್ರ
ಇಲ್ಲಿಂದೇನಿಹುದೊ ವಿಚಿತ್ರ?

ಮುಂದಾಳು

ಓಹ್: ಕವಿ ಕವಿ ಕವಿ!

ಮತ್ತೊಬ್ಬ

ಓಹ್: ಗವಿ ಗವಿ ಗವಿ!

ಇನ್ನೊಬ್ಬ

ಏನು ಕವಿ ಏನು ಗವಿ?

ಮುಂದಾಳು

ನಾವು ಮೊನ್ನೆ ಕಂಡ ಕವಿ.

ಮತ್ತೊಬ್ಬ

ನಮ್ಮ ಬಿನದಕಿರುಳುಗವಿ!

ಇನ್ನೊಬ್ಬ

ಒಳ್ಳೆ ಸಲಹೆಯೊಪ್ಪಿದೆ.

ಬೇರೊಬ್ಬ

ಬಹಳ ಚೆನ್ನು ಒಪ್ಪಿದೆ

ಮುಂದಾಳು

ಹಾತೊರೆಯುವನವ ಜನಕೆ
ಕವನವ ಮೆಚ್ಚುವ ಮನಕೆ.

ಇನ್ನೊಬ್ಬ

ಪಾಪ ಪಾಪ ಅವನೊಂಟಿ—

ಮತ್ತೊಬ್ಬ

ಆತನ ಸತಿ ಜಗಳಗಂಟಿ!

ಮುಂದಾಳು

ಅದೆ ಅದೆ ನಮ್ಮರಿಯು ಸರಸ
ಈ ದಂಪತಿಗಳ ವಿರಸ.

ಹುಡುಗರು

(ಒಬ್ಬೊಬ್ಬರು ಒಂದೊಂದು ಸಾಲನ್ನು ಹೇಳುವರು)

ಇವನಾದರ ಅವಳಾಸರ
ನನಗೋ ಇದು ಬೇಸರ.
ಮೊದಲು ಬುಟ್ಟಿ ತಿಂಡಿಯನ್ನು ಬರಿದುಮಾಡುವ
ಬಳಿಕ ಕವಿಯು ಕಾಡುವ.
ಕವಿ ಕಾವ್ಯವನೋದುತ್ತಿರೆ ಏನು ಗೈಯುವ?—
ನಮ್ಮನಿಲ್ಲಿ ತಂದ ವಿಧಿಯ ನಾವು ಬೈಯುವ.
ಆತನ ಮಕ್ಕಳನೆಣಿಸುವೆ ನಾನು—
ಗೊಣಗುಟ್ಟುವ ಸತಿಯಾಲಿಪೆ ನಾನು—
ಸೂರಗಳುವ ನಾ ಲೆಕ್ಕಿಸುವೆ—
ಮುಗಿಯುದ ಹಾಳಿಗೆ ದುಃಖಿಸುವೆ.

ಮುಂದಾಳು

ಇಂತೆಸಗದಿರಿ, ಕವಿ ಚಾಣಾಕ್ಷ
ಹೆರರಿಂಗಿತವನು ತಿಳಿಯುಲು ದಕ್ಷ.

ಇನ್ನೊಬ್ಬ

ಅನವಧಾನವನು ತೋರಿಸಬೇಡಿ
ಅವನುತ್ಸಾಹವು ಹೋಹುದು ಬಾಡಿ.

ಮುಂದಾಳು

ಅವನೊರೆವುದ ಲಾಲಿಸಿ ತಲೆದೂಗಿ
ಎನ್ನಿರಿ: ನೀನೊಬ್ಬನೆ ರಸಯೋಗಿ!

ಒಬ್ಬ

ಓ ಕಷ್ಟ ಕಷ್ಟ ಓ ಕಷ್ಟವೇ—

ಮತ್ತೊಬ್ಬ

ರಜದ ದಿನದೊಳೋ ನಮ್ಮದೃಷ್ಟವೇ!

ಮುಂದಾಳು

ನೀವೊಲಿಯುದ ಕಾರ್ಯಕ್ರಮವೇಕೆ?
ಬಿಡಿರಿದ ಹೊರಡಿರಿ ಬಿದುರಿನ ಬನಕೆ.

ಇನ್ನೊಬ್ಬ

ಉಹು. ಆ ಫ್ರೆಂಚರ ದೊರೆಯೊರೆದಂತೆ
  ಬೇಸರದೊಳಗೇ ಬಿನದಿಸುವ
  ಕವಿಕಾವ್ಯವನೇ ಲಾಲಿಸುವ.

ಒಬ್ಬ

ಅಗೊ ಅಗೊ ನೋಡದು ಯಾರಲ್ಲಿ?

ಒಂದಾಳು

ಆ ಕವಿಹೆಂಡತಿ–ಬಹಳಿಲ್ಲಿ.

ಮುಂದಾಳು

ನನಗಿಹುದಾಕೆಯ ಗುರುತು.

ಇನ್ನೊಬ್ಬ

ಬಿಸಗೊಳ್ ಕವಿಯನು ಕುರಿತು.

[ತರಕಾರಿ ಬುಟ್ಟಿಯನ್ನು ಹಿಡಿದು ಕವಿಯ ಹೆಂಡತಿ ಪ್ರವೇಶಿಸುತ್ತಾಳೆ]

ಮುಂದಾಳು

(ಮುಂದೆ ಹೋಗಿ)

ನಮಸ್ಕಾರ ತಾಯಿ ನಮಸ್ಕಾರ.

ಕವಿಪತ್ನಿ

ಓ, ನೀವೆ, ನಮಸ್ಕಾರ.

ಮುಂದಾಳು

ಕವಿಯಿಹರೋ ಮನೆಯೊಳಗೆ?
ಇಂದವರಾಸೆಯು ನಮಗೆ.

ಕವಿಪತ್ನಿ

ಅವರಿಗು ಮನೆಗೂ ಏನು ಋಣ?
ಅವರ ತೌರು ಆ ಮಲೆಯ ಬನ.

ಮುಂದಾಳು

ತರಕಾರಿಯ ತಂದೀಯಲೆ ನಾನು?

ಕವಿಪತ್ನಿ

ಇಂತಾರೊರೆವರು–ಇದೆ ಮೊದಲೇನು
ನನಗೀ ಗೃಹಕೃತ್ಯದ ಪಡುಬಾಳು?
ಸಾವತನಕವೂ ನನಗಿದೆ ಗೋಳು.

ಮುಂದಾಳು

ಪಾಪ ಪಾಪ ಕವಿಜನವೇ ಹೀಗೆ—
ಕಾವ್ಯಕು ಸಂಸಾರಕು ಹುಟ್ಟು ಹಗೆ.

ಕವಿಪತ್ನಿ

ಏನಿದು ಮಾತೆಂದಿರಿ? ಸುಮ್ಮನಿರಿ—
ಎಲ್ಲ ಕಾವ್ಯಕೂ ಸಂಸಾರವೆ ಗುರಿ:
ಅಲ್ಲೇನಾಯಿತು ಇಲ್ಲೇನಾಯಿತು
ಅಂದೆಂತಾಯಿತು ಇಂದೆಂತಾಯಿತು
ಅವ ಗೆದ್ದಿವ ಬಿದ್ದುವನೆದ್ದಿದ್ದ—
ಇದ ಬಣ್ಣಿಸೆ ಮಾತುಗಳುದ್ದುದ್ದ.
ಅವಳತ್ತಳು ಇವ ನಕ್ಕನು ಮುಕ್ಕನು—
ಕವಿಯಲ್ಲದೆ ಮತ್ತಾರೀ ಸಿಕ್ಕನು
ಬಿಡಿಸುವರಿಹರ್ರೈ ಲಹರಿ ಲಹರಿಯೊಳು?
ಬೇಕಿವರಿಗೆ ಹೆರರೆಲ್ಲರ ಮಾತುಗಳು
ಬೇಡಿವರಿಗೆ ತಮ್ಮಯ ಮನೆ ಮಾತುಗಳು
ದುಡಿವರಿರಲು ತಾವೇತಕೆ ಪಡಬೇಕು!—
ಅಟ್ಟುದುಂಡು ಹರಟುತ್ತಿದ್ದರೆ ಸಾಕು.

(ಕಂಬನಿಯೊರಸಿಕೊಂಡು)

ಹೋಗಿರಿ ನಿಮ್ಮಯ ಸಖರಿಹರಾ ಬನದೊಳಗೆ
ತುಸ ಬುದ್ಧಿಯ ಹೇಳಿರಿ ಕನಿಕರಿಸಲಿ ನಮಗೆ.

ಬಾರೈ
ಬಾರೌ
ತೇಲೋಣ
ಅವರಂತೆಯೆ ನಾವೂ ಸಾಗೋಣ.

ಎಲ್ಲರೂ
ನೇಹಿಗರೇ ನೇಹಿಗರೇ
ಆ ದೂರದ ಕರೆಗೇ
ಭಯವಳಿದೊಲಿದೆದೆಯೊಳು ಮುದವಾನುತ
ತಿರೆ ತೀರುವವರೆಗೇ–

(ವಾದ್ಯಮೇಳ ಕೊನೆಯ ಚರಣವನ್ನು ನಿಧಾನವಾಗಿ ನುಡಿಸಿ ಮುಗಿಸುತ್ತದೆ.)

ತಿರೆ ತೀರುವ ವರೆಗೆ!

ತೆರೆ

## ದೃಶ್ಯ ೨

[ವನಪ್ರದೇಶ. ತಕ್ಕ ವೇಷದೊಡನೆ ಮಲೆ ಇದೆ, ಬನವಿದೆ, ಹೊನಲಿದೆ. ಮಲೆಗೆ ಮಾತುಂಟು, ಚಲನವಿಲ್ಲ. ಬನಸಿರಿಗೂ ಜಲಸಿರಿಗೂ ಮಾತೂ ಉಂಟು, ಚಲನವೂ ಉಂಟು.— ಕವಿ ವನಮಧ್ಯಗತನಾಗಿ ಹರ್ಷಗೊಂಡಿದ್ದಾನೆ]

ಕವಿ

ಎಂಥ ಸುಂದರ ದಿನವು ಮೈದೋರಿದಂತಿಹುದು
ಇಂದೆನ್ನ ಬಾಳಿನೊಳು. ಹಗುರವಾಗಿದೆ ಚಿತ್ತ,
ತೀಕ್ಷ್ಣವಾಗಿದೆ ಕರಣ, ನಿರ್ಲಿಪ್ತವಾಗಿಹುದು
ಜೀವಾತ್ಮ. ಸ್ಥಿರತೆಯಿಂದೆಚ್ಚತ್ತು, ಅಲೆತಕ್ಕೆ
ಮೈತೆತ್ತು ಕೊನೆಗೆ ಸಂಚಲನ ಸುಪ್ತಿಗೆ ಸಂದ
ತಿಗುರಿಯೊಲು ನಾನಿಹೆನು. ಅಂತಲ್ಲ ಅಂತಲ್ಲ;
ಬಾಳ ವೀಣೆಗೆ ಬಿಗಿದ ಕರಣಗಳ ತಂತಿಗಳ
ಮನವೊಪ್ಪೆ ಶೃತಿಮಾಡಿ ನೂರು ಬೆರಲುಗಳಿಂದ
ಮಿಡಿವಂತೆ ತೋರುತಿದೆ ಪರಮಾತ್ಮ. ಅಚ್ಚರಿ,
ಆವ ನಲವೊಗೆವುದೋ, ಆವ ಸಂಗೀತಕ್ಕೆ
ಅವನ ಮನವೊಲಿವುದೋ! ಹೇ ವಿಪಿನ, ಗಿರಿಮಾಲೆ,
ನಿರ್ಝರ ಸ್ರೋತವೇ, ವನ ಕುಸುಮ ಮಂಜರಿಯೆ,
ವಿಹಂಗಮಾರಾವವೇ, ನೀಲವೇಲಾತೀತ-
ಗಗನವೇ, ದಿನಮಣಿಯೆ, ಪರಶಿವನ ಮನವುಲಿವ
ನೂರು ಸುಸ್ವರಗಳೇ, ಹೊಳಲುಗೊಡಿ ಕರಣದೊಳು,
ತನ್ನ ಗೀತಕೆ ತಾನೆ ವಿಶ್ವಕವಿ ಮನಸೋತು
ಮೋದಗೊಳ್ಳುವ ತೆರದಿ.

(ಕವಿ ಧ್ಯಾನಮಗ್ನನಾಗುತ್ತಾನೆ)

[ಮರದ ಮೇಲಿನಿಂದ ಯಕ್ಷನೊಬ್ಬನವತರಿಸಿ ಹಾಡುತ್ತಾನೆ]

ಕವಿ

ಯಕ್ಷ

ಯೋಜನಗಳಾಚೆಯೊಳು ಎಲ್ಲಿಯೋ ಜನಿಯಾಂತು,
ಮಿಂಚಿನಣುಗಳನೇರಿ, ಸಕಲದಿಙ್ಮಂಡಲವ
ಸಂಚರಿಸುತಂತರದಿ ಮೌನದಿಂ ಮಿಡಿಯುತಿಹ
ಸೋಜಿಗದ ಗೀತವನು ಹಿಡಿಯುತುಜ್ಜ್ವಲಗೊಳಿಸಿ
ಶ್ರೋತ್ರಪಥವೈದಿಸುವ ಯಂತ್ರದೊಲು, ಹೇ ಕವಿಯೆ,
ಬಾಳುಬಾಳುಗಳಾಚೆ ಬ್ರಹ್ಮಾಂಡಹೃದಯಾಂತ-
ರಾಳದೊಳು ಸಂತತಂ ಸಂಜನಿಸಿ, ಆನಂದ-
ಮಾತೃಕೆಯೆ ತಾನಾಗಿ, ವಿಶ್ವಕೆಲ್ಲಕು ಹರಡಿ,
ವಿಕೃತಿಫದರಗಳಲ್ಲಿ ಮೌನವಾಗಿಹ ಶಿವದ
ಗೀತವನು ಕರಣಗೋಚರಮಾಗೆ ಸ್ಪಂದಿಸುತ
ಚೇತನರೊಳಾ ಚಿದಾನಂದವನೆ ಮರುಕೊಳಿಪ,
ಪ್ರಕೃತಿಶಿಲ್ಪಿಯು ಸಮೆದ, ಚಿದ್ಯಂತ್ರ ನೀನಲಾ!
ಮನದ ಮೊನೆಯನು ಮಾಡು ಶಿವಸೂಚಿಯಾಗುವಂತೆ,
ಮರ್ಮವನು ನುಡಿ, ಲೋಕ ತನ್ನ ತಾನರಿಯುವಂತೆ.

[ಯಕ್ಷ ಮರೆಯಾಗುತ್ತಾನೆ]

ಕವಿ

(ಎಚ್ಚತ್ತು ಸಂಭ್ರಾಂತನಾಗಿ)

ಓಹೋ, ಏನಿದು, ಹಾಡೊಗೆಯುತಿದೆ
ಕಾನನ ಮೌನವು ಬಿರಿಯುತಿದೆ.
ಹೇಳುವರಾರಿದು ಕೇಳುವರಾರಿದು
ನಾನೋ ಶಿವನೋ ಶಿವನೋ ನಾನೋ!

ಮಲೆ

ಕೇಳಿದಿರಾ ಇದ ಕೇಳಿದಿರಾ
ಯಕ್ಷನ ವಾಣಿಯ ಕೇಳಿದಿರಾ?

**ಕವಿ**

ಇವ ಕವಿಯಂತೆ; ನಾವರಿವಂತೆ
ಶಿವವಾಣಿಗೆ ಹೊಳಲೀಯುವನಂತೆ!

**ವನಶ್ರೀ**

ಏನು ಏನು ಇವ ಕವಿಯೇನು?

**ಜಲಶ್ರೀ**

ಶಿವವಾಣಿಗೆ ಹೊಳಲೀಯುವನೇನು?
ನಿಯತಿಯ ಮರ್ಮವನರಿತಿಹನೇನು?

**ವನಶ್ರೀ**

ಎನ್ನೊಳಗುದಿಸಿದೆ ತಿಳಿವಿನ ತೃಷ್ಣೆ
ಇವನನು ಕೇಳುವುದೊಂದಿದೆ ಪ್ರಶ್ನೆ.

**ಕವಿ**

ಇದು ಕನಸು—ನನಸಲ್ಲ—ಸುಪ್ತಿಯೊಳು ನಾನಿಹೆನು
ಈವನ್ಯವಾಣಿಗಳಿ ವ್ಯೈವೆತ್ತು ಬಂದರೂ
ಆಗದಚ್ಚರಿ ನನಗೆ!

(ವನಶ್ರೀ ನಡೆಗೊಳ್ಳುವಳು)

ಇದೊ ಇದೋ ಯಾರೀಕೆ?—
ನೆಳಲೊಡನೆ ನೆಳಲಾಗಿ, ಕನಸೊಡನೆ ಕನಸಾಗಿ
ತೋರಿ ತೋರದ ತೆರದಿ ರೂಪುಗೊಳ್ಳುವ ರಮಣಿ—

(ಸ್ವಲ್ಪ ಹೊತ್ತು ನಿಟ್ಟಿಸಿ)

ಅಂಚಿನ ಮಿಂಚಿನ ವನ್ಯ ಶ್ಯಾಮಲ ಚೇಲವ ಧರಿಸಿ,
ಕಾನನ ಸೌರಭವೆಲ್ಲವ ನಿಶ್ವಾಸದೊಳಿಡಿಕಿರಿಸಿ,
ಗಮನದ ಹಾವದಿ ಭಾವದಿ ಬಳುಕುವ ಬಳ್ಳಿಯ ಹೋಲಿ,
ಬರುತಿಹಳೀ ರಮಣೀಮಣಿ, ಕೊಂಕಿನ ಹೂನಗೆ ತಾಳಿ!

ವನಶ್ರೀ

ಕವಿ! ಏನೈ— ಎನ್ನರಿಯೆಯ ನೀನು?

ಕವಿ

ಕ್ಷಮಿಸು ತಾಯೆ, ಅಪರಾಧಿಯು ನಾನು.

ವನಶ್ರೀ

(ಕುಣಿದು ಹಾಡುತ್ತಾಳೆ)

ತ್ರಿವಿಕ್ರಮನಡಿಯೊಲು ಬಾಂದಳವಳೆಯುತ
ನಿಂದಿಹ ತರುಗಳೆ ಎನ್ನಯ ಕಾಯ;
ಇರುಳಿನ ಬಿಡುವೊಳು ಯಾಮಿನಿಯೂಡುವ
ತುಹಿನಸ್ತನ್ಯಮುದಾಯಿತು ಪೇಯ;
ಗಿರಿಪಿತನಾಯುತ ಸಾನುವೊಳೊದಗುವ
ಗೈರಿಕಸತ್ತ್ವವೆ ಎನ್ನಯ ಬೀಯ—
ವನದೈಸಿರಿ ನಾ
ವನದೈಸಿರಿ ನಾ.

ಕೊನರಿಸಿ ಮಲರಿಸಿ ಹೊಸಬಾಳ್ಮೂಡಿಸಿ
ಒಲಿಸುವ ರಸಿಕಂ ಮಧು ಎನ್ನೋಪ;
ಕಂಪನುರಾಗ ನನೆ ರೋಮಾಂಚ
ಕೋಕಿಲ ಕುಕಿಲೇ ಪ್ರೇಮಾಲಾಪ;
ಗಾಳಿಯ ಮೇಳಕು ಗುಡುಗಿನ ತಾಳಕು
ಬಳೆವುದು ನಮ್ಮಯ ನಾಟ್ಯಕಲಾಪ.
ಮಧುವಧುವೇ ನಾ
ಮಧುವಧುವೇ ನಾ.

## ಕವಿ

(ಆಶ್ಚರ್ಯದಿಂದ)

ವನದೇವಿಯೋ ನೀನು ?—ಆಹ ಸಂದೆಗವೇನು !
ಬಗೆದಂತೆ ಮೈದೋರಿ ದಿವ್ಯದರ್ಶನವಿತ್ತೆ.
ನಮಿಸುವೆ ಮಹಾಮಹಿಮೆ, ಧನ್ಯವಾಯಿತು ದೃಷ್ಟಿ
ಸಾರ್ಥವೀ ಬಾಳು.

ನಿನ್ನಿರವು ಬಲು ಹಿರಿದು ತಾಯೆ
ನಿನ್ನ ಮಹಿಮೆಯುಮಂತೆಯೆ ;
ಬನ್ನಗಾಣದೆ ಜಗವೆ ಮಂಗಳ-
ವೆನ್ನೆ ಬಳೆವೀ ಒಲುಮೆಯುಂ.

## ವನಶ್ರೀ

ಹ್ನು—ಕವಿ ನೀನೆನ್ನರಿತಿಹುದಿಂತೆ ?
ನನ್ನೊಲುಮೆಗುಂಟು ದುಃಖದ ಚಿಂತೆ.
ನೋಂಪಿಯ ನೋಂತಿಹ ಪಾಂಥನ ತೆರದೊಳು
ಒಂದಿರುಳಿನಿಯನು ದಾರಿಗನಾಗಲು
ಅಳಲಿಂದೆನ್ನನು ಕಾವನದಾವನು ?
ಅಂದಾಂ ಸುಟ್ಟುರೆ ಸುಯ್ಯಲ ಸುಯ್ವೆಂ
ವಿರಹದ ಕಾಳ್ಕಿಚ್ಚೊಳು ಕಡುನೋವೆಂ
ಎಲೆಸಿರಿ ನೀಗಿ ಅತಿಜಡಳಾಗಿ
ಶಿಶಿರನಿರಾಶಾ ಶೋಷಿತಳಪ್ಪೆಂ.
ಚಿರವಿರಹಿಣಿ ನಾ
ಚಿರವಿರಹಿಣಿ ನಾ.

ಚೈತ್ರಸಮಾಗಮ ಸಂಭೃತಮೋದಂ
ಶಿಶಿರವಿರಹ ಸಂತಾಪ ವಿಷಾದಂ

ಕವಿ

ಈ ತೆರವೇಕಾಯಿತು ಕವಿ, ಬಾಳು—
ನೋವಿಗು ನಲವಿಗು ತಾನಡಿಯಾಳು?
ಇದರೊಳಗನೆ ನೀ ಹೇಳುವೆಯೆಂದು
ಬಂದೆನು ಬೆಸಗೊಳ್ಳಲು ನಿನ್ನಿಂದು.

ಕವಿ

ಚೈತ್ರ ಶಿಶಿರದ ಮರ್ಮ–ನೋವು ನಲವುಗಳೊಳಗು—
ಎನ್ನರಿವಿಗಳವೆ, ತಾಯೆ!

[ಜಲಶ್ರೀ ನಡೆಗೊಳ್ಳುತ್ತಾಳೆ]

ವನಶ್ರೀ

ಅದೊ ಅದೊ ಸೋದರಿ ಮಲೆಪೊನಲ್ಸಿರಿ
ಬರುವಂತಿದೆ ಕವಿ ನಿನ್ನೆಡೆಯೆ;
ಈ ತರುವಕ್ಷದೊಳಡಗುವೆನಿವಳೇಂ
ಬಂದಿಹಳೆಂಬುದನಾನರಿಯೆ.

[ವನಶ್ರೀ ತರುವಿನಂತೆ ನಿಶ್ಚಲವಾಗಿ ಒಂದು ಕಡೆ ನಿಲ್ಲುವಳು]

(ಜಲಶ್ರೀ ನರ್ತಿಸುತ್ತಾ ಬರುತ್ತಾಳೆ)

ಕವಿ

ಪಂಕಜಹಾಸವನೇಳಿಪ ಮೊಗಸಿರಿ
ಈಕೆಗೆ ಮೀನೊಲು ಕಣ್ಣಾಸಿರಿ
ಊರ್ಮಿವಿಲಾಸವ ಹೋಲುವ ನಡೆಸಿರಿ
ಉಡುಚಿತ ಗಗನದೊಲುಡಿಗೆಸಿರಿ!

ಜಲಶ್ರೀ

(ಕುಣಿಯುತ್ತಾ ಹಾಡುತ್ತಾಳೆ)

ಹೆಳವ ಮಲೆಯ ಚಲನದಾಸೆ
ಮೂಗಿ ಬನದ ಗೀತದಾಸೆ

ಸೃಷ್ಟಿಹೊರೆಯ ಹೊತ್ತ ತಿರೆಯ
ನಗುವಿನಾಸೆ ನಾ
ಬಾಳ್ವಿಗೆಲ್ಲ ನಾನೆ ನಚ್ಚು
ಲೋಕಕೆಲ್ಲ ನಾನೆ ಮೆಚ್ಚು
ನಾನೆ ನಾನೆ ಮುಗಿಲ ಹುಚ್ಚು
ಹೊನಲ ರಾಣಿ ನಾ.

ಕಿರಣ ನೆಯ್ದ ಸರಿಗೆಯುಡಿಗೆ
ಇರುಳು ಕೊಟ್ಟ ತಾರೆತೊಡಿಗೆ
ಇಂದುಕಳೆಯ ಹೂವೆ ಮುಡಿಗೆ
ದೇವಕುವರಿ ನಾ
ಬೆಳ್ಳಿನೊರೆಯ ನಗೆನಗುತ್ತ
ತೆರೆಯ ನಿರಿಯ ಚಿಮುಕಿಸುತ್ತ
ಕಡಲ ವರಿಸೆ ತವಕಿಸುತ್ತ
ನಡೆವ ವಧುವೆ ನಾ.

ನಲಿತ ಕುಣಿತವೆನ್ನ ಶೀಲ
ಚಲನವೆನ್ನ ಜೀವಾಳ
ಲುಪ್ತವಾಗೆ ದೇಶಕಾಲ
ಎನ್ನ ಗಾಯನಾ
ದಡದ ಗಿಡಕೆ ಪುಷ್ಪಹಾಸ
ಸನಿಯದಿಳೆಗೆ ಸಸ್ಯಹಾಸ
ಹಾಸಪೂರ್ಣ ಹಾಸಕೀರ್ಣ-
ವೆನ್ನ ಜೀವನಾ.

ಅಚರ ಜಗದ ಚಲನದಾಸೆ
ಮೂಕ ಜಗದ ಗೀತದಾಸೆ

ಕವಿ

ನಿಯತಿನಿಯಮ ನಿಯತ ಜಗದ
    ನಗುವಿನಾಸೆ ನಾ
ವನವಿನೋದ ಮಲೆಯ ಮೋದ
ಕಡಲ ಕೂರ್ಮೆ ನಾಡ ನಲ್ಮೆ
ನಾನೆ ನಾನೆ ಮುಗಿಲ ಮೇಲ್ಮೆ
    ಪೊನಲ ರಾಣಿ ನಾ.

ಕವಿ

ಸ್ವಾಗತವೇ ಪೊನಲ ರಾಣಿ,
ಹರಸು ತಾಯೆ ಮಂಜುವಾಣಿ.
ಒಂದು ಗಳಿಗೆ ಬಿಡುವುಗೊಂಡು
ನಿಲ್ಲು—ಮನಂ ದಣಿಯೆ ಕಂಡು.
ಹಾಸರುಚಿರವಾಗಿ ಬಾಳು
ಧನ್ಯವಾಗಲಿಂದು ಮುಂದು.

ಜಲಶ್ರೀ

ನಿಲ್ಲೆ ನಿಲ್ಲೆ ನಿಲ್ಲಲಾರೆ
ಒಂದು ಚಣವು ನಿಲ್ಲಲಾರೆ
ಚಲನಶೀಲವೆನ್ನ ಬಾಳು
ಅದಕೆ ನಾನಾದೆನಾಳು.
ಹೂವಿನಾಸೆಯನ್ನು ತೋರಿ
ಎಲೆಯ ಕಣ್ಣ ನೀರ ಕಾರಿ
ರೆಂಬೆಯಡ್ಡಗಟ್ಟ ಹಳುವು
ಆಟವಾಡೆ ಕರೆದುದುಂಟು ;
ಮುದ್ದುಮಾಡೆ ಮಡಿಲಿನಲ್ಲಿ
ಬಿಟ್ಟ ನನ್ನನಾತುದುಂಟು ;

## ಕವಿ

ದಾರಿಯಳಲನೀಗಲೆಂದು
ಮಡುವು ನನ್ನ ತಡೆದುದುಂಟು;
ತೆರೆಯ ತೆಕ್ಕೆಯಲ್ಲಿ ಕಡಲು
ನನ್ನ ಸೆರೆಯ ಗೈದುದುಂಟು.
ನಾನು ನಿಂತುದೊಂದೆ ಚಣ
ಸತತ ಗಮನವೆನ್ನ ಗುಣ.

ಗವಿಗಳಲ್ಲಿ ಹುಳ್ಳನಡಗಿ
ಕಲ್ಲಮೇಲೆ ಹಾವನೆರಗಿ
ಮಡುವಿನಲ್ಲಿ ಮೆಲನೆ ಜರುಗಿ
ಕಡಲಿಗೋಡುವೆ.
ಬಿಸಿಲ ಕೋಲ ಹಿಡಿದು ಹತ್ತಿ
ನೀರ ತೇರನೇರಿ ಸುತ್ತಿ
ತಿರುಗಿ ತಿರೆಯ ವಕ್ಷದಲ್ಲಿ
ಧುಮುಕಿ ಹರಿಯುವೆ.

ನಿಲ್ಲಬಯಸಿ ನಿಲ್ಲಲಾರೆ
ಬಿಡುವಿಗೆಳಸಿ ಬದುಕಲಾರೆ
ಚಲನವೆನ್ನ ಬದುಕು ಬಾಳು
ಅದಕೆ ನಾನಾದೆನಾಳು.
ಆಸೆಯೇನೋ–ಅರ್ಥವೇನೋ
ಕಜ್ಜವೇನೋ ಕತವದೇನೋ
ಏಕೊ ಏನೊ ಕಾಣೆ ಕಾಣೆ
ಆವ ಶಕ್ತಿ ಆರ ಆಣೆ?
ಇದನೆ ಕೇಳಬಂದೆಂ
ಇಂತು ಚಣ ನಿಂದೆಂ.

ಕವಿ

ಇರವಿನೊಳಗನರಿತ ನೀನು
ನನ್ನ ಮರ್ಮವರುಹು ಕವಿ.

(ಅದೃಶ್ಯನಾದ ಗಾಳಿಯ ಕರಸ್ಪರ್ಶವನ್ನು ಅಭಿನಯಿಸಿ)

ಸೆರಗನು ಚಿಮ್ಮಿಸುವೆಸಕವಿದಾರದು
ಕಚಕುಳಿಯಿಡುವೀ ಸಾಹಸವಾರದು?
ಓ ನೀನೇ–ಸರಿಸರಿ, ಗೊತ್ತಿದೆ ಚಾಳಿ.
ತೊಲಗುವೆ, ಸುಮ್ಮನಿರ್ರ್ರೆ ಸುಳಿಗಾಳಿ!

[ಜಲಶ್ರೀ ಹೊನಲಿನಲ್ಲಿ ಮರೆಯಾಗುತ್ತಾಳೆ]

[ಗಾಳಿ ನಗುತ್ತಾ ದೃಶ್ಯನಾಗುತ್ತಾನೆ]

ಕವಿ

ವ್ಯೋಮಸಮಾನ ಸ್ವಚ್ಛ ಸುನೀಲಂ
ಹಾಸ ವಿಲಾಸ ಸ್ಫೀತ ಕಪೋಲಂ
ಸ್ವಾಂತದೊಳೊಮ್ಮೆಗೆ ಒಲವಂ ಭಯವಂ
ಒಡಮೂಡಿಸುವೀ ದೇವನದಾವಂ?

ಗಾಳಿ

ಹಹ್ಹ ಹಹ್ಹಹ್ಹ ಹಸುಳೆ ನಿರ್ಝರಿಣಿ
ಎಂತು ನುಸುಳಿದಳು ಮುಳಿದು
ಹಾರಿ ಹೌಹಾರಿ ಬೀರಿ ಬಿರುಗಣ್ಣ
ಎಂತು ಧಿಕ್ಕರಿಸಿ ಹಳಿದು!

ಕವಿ

ಎದೆಯೊಳೊಲವಾಗೆ ಮನಕೆ ಭಯವಾಗೆ
ಇಂತು ನಗುತಿರುವ ತಂದೆ,
ವಿಶ್ವನಿರ್ವಾಹಕಾರ್ಯದೊಳಗಾರು
ಆವ ಕತದಿಂದ ಬಂದೆ?

## ಗಾಳಿ

ಭಳಿರೇ, ಪೋರಾ, ಲೇಸನೆ ಎಂದೆ
ದಿಟ ನಾನೆಲ್ಲಾ ಜೀವರ ತಂದೆ !—
ಪಾತಾಳದಲಿ
ಹದುಗಿರೆ ಜೀವವು ಕಾಳದಲಿ
ಪೇರಾಳದಲಿ
ಒತ್ತುವ ಕಾಲದ ಭಾರದಲಿ,
ಹಗುರಾಗುವ ಹರಕೆಯೊಳು
ತಿರೆಯಿರೆ ಬದುಕಾಗದ ಬಯಕೆಯೊಳು,
ಅವಳುಸ್ಸೆನ್ನಲು ನಾನಂದೆ
ಮೈದಾಳುತ ನಿಂದೆ.
ಅಂದಾದಾನಂದವನೇನೆಂಬೆ !
ಜಗವೆಲ್ಲವು ತುಂಬೆ,
ಹಬ್ಬಿತು ನಮ್ಮುರುಸಂತಸದುದ್ಗಾರ;
ತಿರೆ ಚೀರಿದುಳುತ್ಕರ್ಷದ ಚೀತ್ಕಾರ;
ಕುಣಿದಳಣುಗಿ ತನ್ನಿಚ್ಛೆ ಬಂದೊಲು,
ಬಹುಕಾಲದ ಹೆಬ್ಬಯಕೆ ಸಂದೊಲು;
ನೆಲ ಹೊಮ್ಮಿತು ಮಲೆಯಾಗಿ,
ಜಲ ಚಿಮ್ಮಿತು ಹೊಳೆಯಾಗಿ,
ಹೊರಕ್ಕೆ ಹಬ್ಬಿತು ಹಸುರಾಗಿ,
ಜೀವನ ಹಗುರಾಗಿ;
ಹಬ್ಬಿತು ಹೆಸರಾಗಿ,
ಬಗೆಬಗೆ ಬಸಿರಾಗಿ,
ಅದು ಇದು ಅವನಾಗಿ,
ತಾನ್ ತಾನಾಗಿ,
ನೀನಾಗಿ !

**ಕವಿ**

ನಮೋ ನಮೋ ಜಗತ್ಪ್ರಾಣ
ನಮೋ ನಮೋ ನಮೋ
ನಮೋ ಸಕಲ ಸಂತ್ರಾಣ
ನಮೋ ನಮೋ ನಮೋ!

**ಗಾಳಿ**

ಏಳೇಳ್ ಏಳೇಳ್
ಈ ಬಿದ್ದೇಳುವ ನಾಟಕ ಸಾಕೇಳ್.
ಬಾಳ್ ಬಾಳ್
ನೀ ಬಾಳಲಿ ಎಂದೇ ನಾನಿಹುದೇಳೇಳ್.
ಆದೊಡೆ ಇದ ಕೇಳ್:
ನೀನೊಬ್ಬನೆ ಇಂದೆನ್ನಂ ನೋಡುತ ನಗದೆ
ತನುವಂ ನೆಲಕೊಗೆದೆ;
ನಾ ನಗುವುದಕೇ ಜಗಕಾದೆ.

**ಕವಿ**

ದಿಟ ದೇವಾ, ನನ್ನುಸಿರೇ,
ನೀನೇ ಸರಿ ಮುದದಾಸರೆ
ಈ ನೋವಿನ ಜಗದಿ.

**ಗಾಳಿ**

ಕವಿ, ಸಾಕೀ ಹೊಗಳಿನ ಹಾಸ್ಯ
ಲೋಕದ ನಗೆಗಾಯಿತು ನನ್ನೀ ದಾಸ್ಯ.
ನಾ ಬೀಳಿಸುವೆಲೆ ನಗುವುದು ನನ್ನನೆ ಮಾಗಿಯೊಳು
ನಾ ಕಾಣಿಸುವೆಲೆ ನಗುವುದು ನನ್ನನೆ ಸುಗ್ಗಿಯೊಳು
ನಾ ಬಿರಿಸುವ ಹೂ ನಗುವುದು ಹಿಂದೆಯೆ ಕಿಲಕಿಲನೆಂದು

ನಾ ಬರಿಸುವ ಪಿಕದಿಂಚರವಣಕಿಸುವುದು ಕುಹು ಎಂದು
ಮೋಡವು ಗುಡುಗುವುದೆನ್ನಯ ಬವಣೆಗೆ ನಗುವಂತೆ
ಮಿಂಚು ನಕ್ಕು ಮೋರೆಯ ತಿವಿದೋಡುವುದಿಂತೆ.
ನಾ ಮುಗಿಲಿಂ ಪಟಪಟನುದುರಿಸುವೀ ಎಳಹೊನಲೂ
ಮಲೆಯಿಂದುರುಳುತ ಮೊದಲಿಡುವುದು ನನ್ನನೆ ನಗಲು.
ನನಗಿದರಿಂ ಕವಿ ಮುದವಾಗದೆ ಇಲ್ಲ
ಎಳಮಕ್ಕಳ ಬಳಕೆಯು ಮುದ್ದಿವು ಎಲ್ಲ.
ಆದೊಡೆ,
ಮಲರೊಲುಮೆಯ ಸೌರಭ ಸಂದೇಶವನೊಯ್ಯುವ
ಮಳೆ ಬಿಲ್ಲಿನ ಕರಿಮೋಡದ ತೇರನು ತುಯ್ಯುವ
ದನಿ ದೋಣಿಯ ಕಿವಿಕಿವಿಗೂ ತೇಲಿಸಿ ನಲಿವ
ಋತುಋತುವಿಗು ತಿರೆಯಕ್ಕನ ಸಿಂಗರಕೊಲಿವ
ಮುದವೊಂದೆಯೆ ಆವಗಮಿಲ್ಲೆನಗೆ.
ತೊತ್ತೇ ದುಡಿ ಎಂದಾರೋ ನನ್ನೊಳಗೆ
ನಿಂದಾಡುತ್ತಿಹನೇಗೈಯುವೆನಿವಗೆ
ಆರಿದು ಯಾರಿದು ಪೇಳುವರಾರೆನಗೆ?
ಓ ಓ ಇವನೆಂತೆನ್ನಂ ಕೆರಳಿಸುವಂ
ಹಿರಿಬಾನಿನ ಬಯಲೊಳಗೆಂತೊರಲಿಸುವಂ!
ನಾ ನೆಗೆವೆಂ ಕಿತ್ತೊದರುವೆನಾರುವೆಂ
ನಾ ಮೊರೆವೆಂ ಪರಿದೋಡುವೆನೂಳುವೆಂ.
ನಾ ಮುಳಿದಷ್ಟೂ ಕುಣಿವುದು ಜಗ ಹುಚ್ಚೆದ್ದು.
ಪೇಳ್ ಪೇಳ್ ಕವಿ ಈ ನಗೆಗೇಸಿದೆ ಮದ್ದು?
ನಾನೇತಕೆ ಹಾಸೊಳು ಹೊಕ್ಕೊಳು ಜೀವಸಮಸ್ತವ ನೆಯ್ವೆಂ
ಎಂದೂ ಮುಗಿಯುದ ಕಜ್ಜಕೆ ವಿಧಾತನ ಬಯ್ವೆಂ?
ಓ ನಾನೀ ತಿರೆಯಕ್ಕನ ಮಕ್ಕಳ ದಾಸ್ಯಕ್ಕೆ
ಪಕ್ಕಾಗಿಹೆನಂತೆಯೆ ಸೃಷ್ಟಿಯ ಹಾಸ್ಯಕ್ಕೆ.—
ಇಂತೇಕಾಯಿತು ಪೇಳ್
ಕವಿ, ಪೇಳ್ ಪೇಳ್!

**ಕವಿ**

**ತರು ಫೊನಲ್ ಮುಲಿ**

(ನಗುತ್ತಾ)

ಪೇಳ್ ಪೇಳ್ ಕವಿ
  ಪೇಳ್ ಪೇಳ್ !

**ಗಾಳಿ**

ಓಹ್ ಓಹ್ ಓಹ್ !
ಇವ ಇವನೇಗೆಯ್ವಿನ್ ?
        ಓಹ್ !

[ಗಾಳಿ ಪರಿದೋಡಿ ಮರೆಯಾಗುತ್ತಾನೆ]

[ಮಾನವತೇಜಸ್ಸು ಬರುತ್ತದೆ]

**ತರು ಫೊನಲ್ ಮುಲಿ**

(ಜೊತೆಯಾಗಿ)

ಬಂದಂ ಬಂದಂ ನರನವತಾರ
ಬಂದನಿಗೋ ನಮ್ಮಯ ಸುಕುಮಾರ
ಈತನದೇತಕೆ ಬಂದಿಹನೋ
ಪ್ರಶ್ನೆಯದಾವುದ ತಂದಿಹನೋ !

(ಕವಿಯನ್ನು ಕುರಿತು)

ನಿನ್ನಂಹತೆಯೋ ಮೈಯನು ಕೊಂಡು
ಬಂದಂತಿಹುದೈ ಇಂತೀ ಗಂಡು
ಈತನದೇತಕೆ ಬಂದಿಹನೋ
ಪ್ರಶ್ನೆಯದಾವುದ ತಂದಿಹನೋ !

ಕವಿ

ನಮಿಸಲೆ, ಮುಡಿಯಿಡಲೇ, ಸ್ವಾಗತಿಸಲೆ,
ಸೆಳೆದಪ್ಪಲೆ, ನೇಹಿಗ ಬಾ ಎನ್ನಲೆ?
ತಕ್ಕುದುದೇನಂ ಗೈಯಲಿ ಈಗ
ಬಂದನಿಗೋ ನೀವ್ ಪೇಳಿರಿ ಬೇಗ.

ತರು ಪೊನಲ್ ಮಲೆ

ನಮಿಸು ನಮಿಸು ನಮಿಸು
ನಿನಗೆ ನೀನೆ ನಮಿಸು.

(ಕವಿ ನಮಿಸುವನು)

ಮಾನವತೇಜಸ್ಸು

ನಮಿಸಿ ನಮಿಸಿ ನಮಿಸುವುದೇ
ರೂಢಿಯಾಯ್ತು ನಿನಗೆ ಕವಿ,
ಏಳು, ಎದ್ದು ಜತೆಗೆ ನಿಲ್ಲು
ನಿಂತು ಬಾಳ್ವ ಮುದವ ಸವಿ.

ಕವಿ

(ಎದ್ದು)

ಓ ನೀನಾರೈ ನೀನಾರು?
ನನ್ನಂತಿರದೆಯೆ ನನ್ನಂತಿರುವೆ
ಹೆಮ್ಮೆಯ ಮಾತುಗಳುಸಿರುತ್ತಿರುವೆ
ನನ್ನ ಸಮಸ್ತದ ತುಸತುಸವೆಲ್ಲಾ
ಮೈದಾಳಿದ ತೆರ ನೀನಿಹೆಯಲ್ಲಾ!
ನೀನಾರೈ ನೀನಾರು?

## ಮಾನವತೇಜಸ್ಸು

ಇರುಳಿಗೆ ಇರುಳೊಂದಲ್ಲದೆ
ಮಿಕ್ಕುದು ತುಸವುಂಟು.
ಬೆಳಕಿಗು ಬೆಳಕೊಂದಲ್ಲದೆ
ಮಿಕ್ಕುದು ತುಸವುಂಟು.
ನೆಲಕೂ ಮಲೆಗೂ ಬನಕೂ
ಪೊನಲಿಗು ಮಾರುತಗು
ತಂತಮ್ಮಿರವನು ಮಿಕ್ಕಿಹ
ತುಸವುಂಟಿಲ್ಲರಿಗು.

ತಾನ್ ತಾನಲ್ಲದೆ ಮತ್ತೇನೆನೆ
ತಾನದ ಅದ ನಕ್ಕು
ಬೇರೊಂದಹುದಿಗೊ ನಾನಾರ್
ಎನುತೆ ಸಮಸ್ತಕ್ಕು.
ಇದರೀ ತುಸ ಅದರಾ ತುಸ
ಇಂತಿವು ತಿಳಿಯದಲೆ
ನಾನೀ ತುಸ ಮಿಗುವಾಟದೊ-
ಳಾದ ವಿಚಿತ್ರವೆಲೆ.

ಜೀವಿಗಳೆಂತೀ ಎಲರೊಳು
ಉಸಿರಾಡುವರಂತೆ
ನನ್ನಯ ಮನವುಸಿರಾಯಿತು
ದೇವರು ಬಾಳ್ವಂತೆ.
ಇವರಾರ್ ?— ಎನ್ನಂ ಮಿಗುತಿಹ
ನಲವಿನ ರಸದ ಕೆನೆ
ಆಗುವರಳಿವರು ಅಲ್ಲಿಯೆ
ಮಂಜಿನ ಗಡ್ಡೆಯೆನೆ.

**ಕವಿ**

ನಾನಾರ್ ?—ದೇವರ ನೆಲ
ಮತ್ತವರಾಡುಂಬೊಲ
ನಾ ದೇವರ ಉಸಿರು
ಸಗ್ಗದ ಬಸಿರು.

**ಕವಿ**

ಓ ಸ್ವಾಗತ ಸ್ವಾಗತ ಪುರುಷ
ನನ್ನುಬ್ಬಿಸುತಿದೆ ಹರುಷ !
ನಾ ದೇವರ ಉಸಿರು
ಸಗ್ಗದ ಬಸಿರು !
ತಿರೆಗೀ ಮಲೆ ಮಲೆಗೀ ಬನ
ಬನಕೀ ಖಗಮಿಗವು
ಬಣ್ಣಕೆ ಕಣ್ ಸದ್ದಿಗೆ ಕಿವಿ
ಕಂಪಿಗೆ ನಾಸಿಕವು
ಇವಕೂ ಮನ ಮನಕೂ ತಿಳಿ-
ವದಕೂ ಲಘು ನೀನು
ನೀ ಮಿಕ್ಕರೆ ರಸವದುವು
ಅದು ಮಿಗೆ ಮುಂದೇನು !

**ತರು ಪೊನಲ್ ಮಲೆ**

ಅಹಹಾ !
ಅದು ಮಿಗೆ ಮುಂದೇನು ?

**ಕವಿ**

ಪೇಳ್ ಪೇಳ್—ಅದು ಮಿಗೆ ಮುಂದೇನು ?

ಮಾನವತೇಜಸ್ಸು

ಇದು ಮಿಗೆ ಮುಂದೇನೆನ್ನುತ
ಕೌತುಕ ಮಿಗಲೆನಗೆ
ನನ್ನೆದೆರಸದೊಳು ನಾನೇ
ದೇವರ ಕೆನೆವರೆಗೆ
ಈಸುವೆನದನೋಸರಿಸುವೆ-
ನಿಹುದುಹ್ನು ಇಲ್ಲಿಂದು.
ಸಂಶಯದೊಳೆ ಹಿಂದಿರುಗುವೆನ್—
ಇದಕಹ ಕೊನೆ ಎಂದು ?

ತರು ಪೊನಲ್ ಮಲೆ

ಹಾಹಾ ! ಇದಕಹ ಕೊನೆ ಎಂದು ?

ಮಾನವತೇಜಸ್ಸು

ಒಮ್ಮೆಗೆ ನಾ ಜಟೆಯೊಳು ಶಿವ
ಗಂಗೆಯು ತಡೆದವೊಲು
ಜಗವಡಗಿಪೆನೆನ್ನಾಸೆಯು
ಜಟೆಯೊಳು ತಂಗುವೊಲು.
ಇವಕೆಲ್ಲಕು ನಾನೆಯೆ ಕೊನೆ
ಎನಲವು ಸುಳಿ ಸುತ್ತಿ
ನಿಂತೆಡೆಯೊಳೆ ಎದೆ ಕಡೆವುವು
ನಂಜನೆ ಮೇಲೆತ್ತಿ !
ನಂಜನಿಂತು ಪಡೆದುಣುವೆನ್
ನಲವಿಗೆನಾ ಬಯಸಿ
ಹಲ ಬಗೆ ದೇವರ ಹೆರುವೆನ್
ನಲ್ಮೆಗೆಯೇ ತವಿಸಿ.

ಕವಿ

ಇನ್ನೂ ಮುಂದೇನಿಹುದೆನೆ
ಹಿಂದಕೆ ಅಡಿಯಿಟ್ಟು
ಅಶಾಂತಿಗಾನೊಳಗಪ್ಪಿನ್
ಆಸ್ತಿಕವನೆ ಬಿಟ್ಟು.
ನಾ ತಂಗುವುದೆಲ್ಲಿ
ಅಶಾಂತಿ ಹಿಂಗುವುದೆಲ್ಲಿ?
ನೀನರಿತವನಾದೊಡೆ ಪೇಳು
ಪೇಳುತ ಬಾಳು.

ಕವಿ

ಓ ನರನ ತೇಜವೇ
ಹಿರಿಯುಹಂಕಾರವೇ
ನೀ ನಿನ್ನ ತೇಜದಿಂದೆನ್ನರಿವ ಕೋರೈಸು-
ತಜ್ಞಾನದಿರುಳನ್ನೆ ತರುತಲಿರುವೆ.
ನಿನ್ನ ಸಂದೆಗವಿದನು ಯಾವ ದೇವತೆಗೊರೆವೆ
ದೇವರಿಗು ಮಿಗಿಲಾದುದೆಂತು ತಿಳಿವೆ?

[ಕವಿ ಧ್ಯಾನಮಗ್ನನಾಗುವನು]

[ಬೆಳಕು ಬಲಿತು ಚೆಲುವ ದೇವಿ ಅವತರಿಸುವಳು]

ಮಾನವತೇಜಸ್ಸು

ಬಂದಳೀಕೆ ಬಂದಳೀಕೆ
ನಿನ್ನ ಬಾಳನಾಳ್ವ ದೇವಿ
ಇನ್ನು ನಾನು ಬರಿಯ ಆವಿ
ಈಕೆಯೊಳೇ ಲೀನ
ಈಕೆಗಾನಧೀನ!

[ಮಾನವತೇಜಸ್ಸು ಕರಗುತ್ತದೆ]

**ಕವಿ**

(ಎಚ್ಚತ್ತು)

ಓಹೋ ಹೋ ಕರಗಿತು
ನನ್ನಹಂತೆಯುಡುಗಿತು!
ಇವಳಾರಿವಳಾರೆನ್ನಲು
ನನ್ನ ಸೊಲ್ಲೆ ಸೊರಗಿತು
ಕಾಣೆ ಕಣ್ಣೆ ಸೋತಿತು
ಅರಿಯೆ ಮನವೆ ಜೋತಿತು
ಆಹಾಹಾ ಬೆಳಕೇ!

(ಚೆಲುವ ದೇವಿ ಕುಣಿಯುತ್ತಾಳೆ. ತರು ಪೊನಲ್ ಮಲೆ ಮಾರುತ ಮಾನವತೇಜಸ್ಸುಗಳು ಹಿಮ್ಮೇಳವಾಗುತ್ತವೆ.)

**ಚೆಲುವ ದೇವಿ**

ನೋಡು ನೋಡು ಮೂಡಿಹೆನು
ಕೇಳು ಹಾಡ ಹಾಡುವೆನು—
ರವಿಯು ಮಿಗುವ ಹಿರಿ ಬೆಳಕು
ಹೊಳಹು ನಾನು ಎಲ್ಲದಕು;
ಅಹ ಎನ್ನಲು ತೋರುವೆನ್
ಉಹು ಎನ್ನಲು ಜಾರುವೆನ್.
ಎಲ್ಲದರೊಳು ಎಲ್ಲೆಲ್ಲಿಯು
ಹೊಂಚುತಿರುವೆನಂಚೊಳೆ
ಮಿಂಚಿಗಿಂತ ಚಂಚಲೆ.

ನಲವೆ ನನ್ನ ಕಿರಣವು
ನರರೆದೆಯೋ ಕರಣವು;
ಎಲ್ಲದರೊಳು ಎಲ್ಲೆಲ್ಲಿಯು

# ಕವಿ

ಕಾಂಬ ಚೆಲುವೆ ವಿವರಣವು
ನನ್ನಖಂಡ ಕಾಂತಿಯು;
ನೋಡು ನೋಡು ಎಲ್ಲೆಡೆಯೊಳು
ನನ್ನ ಈ ವಿಭೂತಿಯು.

ಒಮ್ಮೆ ತೋರಿದಂತೆ ತೋರೆ
ಲಘು ಲಘು ಲಘು ಅಸ್ಥಿರೆ;
ಎಂತಿದ್ದರು ಧೀರರರಿವ-
ರದಕೆ ನಾನು ಸುಸ್ಥಿರೆ—
ಬಯಕೆಯೆನಗೆ ಬಹುಭಾರ
ಆಸೆಗೆನಗು ಬಹುದೂರ,
ಎಲ್ಲದರೊಳು ಎಲ್ಲೆಲ್ಲಿಯು
ನಾನಿಹೆ ಬಲು ಹತ್ತಿರ,
ಮೋಹಕಿಂತ ಎತ್ತರ.

ತಿರೆ ತರು ಮಲೆ ಕೈಚಾಚಿ
ನನ್ನನೆಟುಕಲೆಳಸಿಹುದು;
ಆಗಸವೆನ್ನನು ಬಾಚಿ
ತಬ್ಬಲಿಂತು ಬಯಸಿಹುದು;
ನಿಂತೆಡೆ ನಿಲ್ಲದೆ ಎಲರು
ನನ್ನನಲಾ ಹುಡುಕುತಿದೆ;
ಮನವಾಸೆಯ ಗವಿ ಹೊಕ್ಕು
ನನಗಾಗಿಯೆ ದುಡುಕುತಿದೆ.
ಬಿಸಿಲುಕುದುರೆಗಿಂತ ಹುಸಿ
ಎಂಬರೆನಗೆ ಹಂಬಲಿಸಿ.
ಹಾ ದಿಟ ಹಾ ದಿಟ ಮಾತು!—
ಹೋಹುದೆನಗೆ ಜಗ ಸೋತು.

ಕವಿ

ಆದೊಡಿಹೆನು ನಾನಂತೂ
ಎಲ್ಲದರೊಳು ಎಲ್ಲೆಲ್ಲಿಯೂ
ದೇವರುಗಳಿ ಸೋಜಿಗದಿಂ-
ದೆನೆ ಎಂತು ಎಂತು !

ನೋಡು ನೋಡು ಮೂಡಿಹೆನು
ಕೇಳು ಹಾಡ ಹಾಡಿಹೆನು.

ಕವಿ

ಓಹೋಹೋ ಓಹೋಹೋ !
ಹೊಮ್ಮಿತು ಜಗ ಹೊಮ್ಮಿತಿರವು
ಹೊಮ್ಮಿತು ರಸ ಹೊಮ್ಮಿತರಿವು
ಓಹೋಹೋ ಓಹೋ !

[ಚೆಲುವ ದೇವಿಯ ನೃತ್ಯವನ್ನು ನೋಡುತ್ತಾ ಸಮಾಧಿಸ್ಥನಾಗುತ್ತಾನೆ]

[ಚೆಲುವ ದೇವಿ ಮೆಲ್ಲಮೆಲ್ಲನೆ ರಂಗದೊಳಕ್ಕೆ ಕುಣಿಯುತ್ತಾ ಹೋಗುತ್ತಿರುತ್ತಾಳೆ; ಬೆಳಕು ಮೆಲ್ಲಗೆ ಮಸಕಾಗುತ್ತಿರುತ್ತದೆ]

ಯಕ್ಷ

(ಪ್ರವೇಶಿಸಿ)

ಓವೋವೋ ಓವೋವೋ !
ನೆಲ ಮಲೆಯೇ ತರು ಪೊನಲೇ
ಓ ಮಾರುತ ಓ ಮುಗಿಲೇ
ಓ ನರತೇಜವೆ, ಕವಿಯೇ,
ಎಚ್ಚರಿ ಎಚ್ಚರಿ ನಲವಿಂ
ಮುತ್ತಿರಿ ಮುತ್ತಿರಿ ಚೆಲುವಂ.
ಹಿಡಿದುಕೊಳ್ಳಿ ಸಿಕ್ಕಿಹಳು
ಇಗೊ ಮುಂದೆಯೆ ನಕ್ಕಿಹಳು.

**ಕವಿ**

ಇವಳೆ ಇವಳೆ ನಿಮ್ಮ ಛಲ
ನಿಮ್ಮ ಗೆಯ್ಮೆಗಿವಳೆ ಫಲ
ನಿಮ್ಮ ಪ್ರಶ್ನೆಗಿವಳುತ್ತರ
ಇಹಳಿಗೊ ಹತ್ತಿರ ಹತ್ತಿರ!
ಓ ಇವಳ ಕಾಂತಿಯೇ
ಎಲ್ಲರೀ ಭ್ರಾಂತಿಯೇ!
ಓಹೋ ಸರಿದಳು ದೂರಕೆ
ಮುಗಿಲಾಚೆಯ ತೀರಕೆ!

(ಬೆಳಕಿನ ಉಜ್ಜ್ವಲತೆ ಕಡಮೆಯಾಗುವುದು. ತರು ಪ್ರೊನಲ್ ಮಲೆ ಮಾರುತ ಮಾನವತೇಜಸ್ಸುಗಳು ಆನಂದದ ಮತ್ತಿಳಿದು ಎಚ್ಚರುವುವು. ಕವಿ ಮಾತ್ರ ಸಮಾಧಿಯಲ್ಲೇ ಇದ್ದಾನೆ.)

**ತರು ಪ್ರೊನಲ್ ಮಲೆ ಮಾರುತ ಮಾನವತೇಜಸ್ಸು**

ಆ಼ ಆ಼,
ಏನಾಯ್ತು ಮುಗಿವಳೆಲ್ಲಿ?

**ಯಕ್ಷ**

ಜಡರೇ ಬಡವರೆ ಅಲ್ಲಿ!

**ತರು ಪ್ರೊನಲ್ ಮಲೆ ಮಾರುತ ಮಾನವತೇಜಸ್ಸು**

ಆ಼ ಆ಼,
ನಮ್ಮ ಕೆಳೆಯು ಕವಿ ಎಲ್ಲಿ?

**ಯಕ್ಷ**

ಸೊಕ್ಕಿ ಸೊರಗಿ ಇಹನಿಲ್ಲಿ.

**ತರು ಪ್ರೊನಲ್ ಮಲೆ ಮಾರುತ ಮಾನವತೇಜಸ್ಸು**

ಏನಾಯ್ತೇನಾಯ್ತಿವಗೆ
ನಮ್ಮ ಪ್ರಶ್ನೆಗೇಬಗೆ?

**ಯಕ್ಷ**

ಅವನ ಪಾಡಿಗವನ ಬಿಡಿ
ನಿಮ್ಮ ಹರಕೆಯುವನಿಗಿಡಿ.
ಮನುಜರಾರೊ ಬರುತಿಹರು
ಬೇರೆ ಬಗೆಯು ತರುತಿಹರು ;
ಹೊರಡಿ ನಿಮ್ಮ ನಿತ್ಯಕೆ
ದೈನಂದಿನ ಕೃತ್ಯಕೆ.

**ತರು ಪೊನಲ್ ಮಲೆ ಮಾರುತ ಮಾನವತೇಜಸ್ಸು**

ಹಾ! ಹಾ! ನಡೆವೆವಯ್ಯ ನಿತ್ಯಕೆ
ದೈನಂದಿನ ಕೃತ್ಯಕೆ!

[ತರುಪೊನಲ್‌ಮಲೆಗಳು ತರು ಪೊನಲ್ ಮಲೆಯಾಗಿ ನಿಲ್ಲುವರು. ಗಾಳಿ ಮಾನವತೇಜಸ್ಸು ಅದೃಶ್ಯವಾಗುವರು. ಯಕ್ಷ ಅಂತರ್ಧಾನನಾಗುತ್ತಾನೆ. ಬನದಲ್ಲಿ ಯೋಗನಿದ್ರೆಯಲ್ಲಿರುವಂತೆ ಕವಿ ಇದ್ದಾನೆ.]

ಇಲ್ಲಿಗೆ ಯಕ್ಷಗಾನ ಮುಗಿಯಿತು.

[ಮುಂದಾಳೂ ಸ್ನೇಹಿತರೂ ಬರುತ್ತಾರೆ.]

**ಮುಂದಾಳು**

ನೋಡಿರಿ ನೇಹಿಗರೇ ಕವಿ ಅಲ್ಲಿ
ಬನ್ನಿಬನ್ನಿರೋ ಸೊರಗಿಹನಲ್ಲಿ!

**ಒಬ್ಬ**

ಸೊರಗಿಲ್ಲವೊ, ಮಧ್ಯಾಹ್ನದ ನಿದ್ರೆ.

**ಇನ್ನೊಬ್ಬ**

ಮುಖದೊಳಗೊತ್ತಿದೆ ಹಸಿವಿನ ಮುದ್ರೆ!

ಮುಂದಾಳು

(ಮುಂದೆ ಹೋಗಿ ಕವಿಯನ್ನು ನಿಟ್ಟಿಸಿ ಸಂಭ್ರಮಗೊಂಡು ಹಿಂದಕ್ಕೆ ಬಂದು ಗೆಳೆಯರನ್ನು ಕುರಿತು)

ದೂರ ಸರಿಯಿರಿ, ದೂರ ಸರಿಯಿರಿ
ಸದ್ದುಮಾಡದಿರಿ.
ನಡುವಗಲ ಸುಖನಿದ್ರೆಯಲ್ಲದು
ಬೇರೆ ಬೆರಗಿನ ಬಗೆಯಿದು.

ಏನೊ ಅಚ್ಚರಿ ತೋರಿ ಥಟ್ಟನೆ
ಮನವ ದಿಟ್ಟಿಯನೊಯ್ದಿದೆ
ಕಣ್ಣತುಟಿಗಳ ಮೆಲನೆ ತೆರೆಯುತ
ನಲವು ಅರಿವನೆ ಕದ್ದಿದೆ.

(ಎಲ್ಲರೂ ಹಿಂದೆ ಸರಿದು ಬೆರಗುಗೊಂಡು ಮೌನದಿಂದ ನಿಲ್ಲುತ್ತಾರೆ)

ಮತ್ತೊಬ್ಬ

(ತುಸ ಮುಂದೆ ಬಗ್ಗಿ ನಿಟ್ಟಿಸಿ)

ಹೊರಗೆ ಕಾಣದ ನೋಟವೊಂದನು
ಕಂಡು ಸೊಕ್ಕಿಹನೀತನು
ಅಬ್ಬ ಈ ಆನಂದಯೋಗದೊ-
ಳೆಂತು ಕಳೆಗೊಂಡಿರುವನು !

[ಕವಿಯನ್ನು ಮರಸಿ ಒಳ ತೆರೆ ಬೀಳುತ್ತದೆ]

ಇನ್ನೊಬ್ಬ

ಇಲ್ಲಿ ಬರಿ ಮಲೆ ಹೊನಲು ಬನವಿದೆ
ಎಲ್ಲೆಡೆಯು ಇರುವಂತೆಯೇ
ಇಲ್ಲಿ ಏನನು ಕಂಡು ಕವಿ ಈ
ಬೆರಗನಾಂತನೊ ಕಾಣೆನು !

ಕವಿ

**ಮುಂದಾಳು**

ಹೊರಗನೊಂದನೆ ಕಾಂಬ ನಮಗೆಂ-
　　ತಹುದು ಈ ಬಗೆಯಚ್ಚರಿ?
ಎಲ್ಲರೊಳಗನು ತನ್ನ ಭಾವದಿ
　　ಬಿಂಬಿಪೀ ಕವಿ ಅಚ್ಚರಿ.

**ಮತ್ತೊಬ್ಬ**

ಇಂದಿವನ ಈ ಬಗೆಯ ಕಾಣುತ
　　ಕಳೆದುಕೊಂಡೆವು ಹಕ್ಕನು
ಅವನ ಭವವನು ಅಂತೆ ಕಾವ್ಯವ
　　ಹಾಸ್ಯಮಾಡುವ ಹಕ್ಕನು!

**ಮುಂದಾಳು**

　　ಅಂತಲ್ಲ ಅಂತಲ್ಲ ಕೇಳಿಯಾ—
ತಾನು ಕಂಡುದ ನುಡಿಯಲಿಳಸುವ
　　ಕತೆಯ ಕಪ್ಪಿಗೆ ತಾಯಿಯು
ನಕ್ಕ ತೆರ ನಾವೆಲ್ಲ ನಗುವೆವು
　　ಇವ ನುಡಿಯೆ, ಇದೆ ಮಾಯೆಯು!

**ಇನ್ನೊಬ್ಬ**

ನುಡಿವ ಕವಿಗೂ ಪಡುವ ಕವಿಯೇ
　　ಮಿಗಿಲು—ನೆಳಲಿಗೆ ಬನ್ನಿರಿ,
ನಲವುಮತ್ತಿಳಿದೀತ ಮರಳುವ
　　ತನಕ ಮೌನವ ಕೊಳ್ಳಿರಿ.

[ಎಲ್ಲರೂ ಹೊರಡುತ್ತಾರೆ]

**ತೆರೆ**

**ಮುಗಿವು**

225—43. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರವರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು.

# ಕಾವ್ಯಾಲಯದ ಪ್ರಕಟನೆಗಳು

**ಕೆ. ವಿ. ಪುಟ್ಟಪ್ಪನವರ—**

| | | | | |
|---|---|---|---|---|
| ಬೊಮ್ಮನಹಳ್ಳಿಯ ಕಿಂದರಿಜೋಗಿ | .. | ೦ | ೯ | ೦ |
| ಯಮನ ಸೋಲು ಮತ್ತು ಇತರ ನಾಟಕಗಳು | .. | ೧ | ೦ | ೦ |
| ಕಿಂದರಿಜೋಗಿ ಮತ್ತು ಇತರ ಕಥನಕವನಗಳು | .. | ೧ | ೦ | ೦ |
| ಸಂನ್ಯಾಸಿ ಮತ್ತು ಇತರ ಕಥೆಗಳು | .. | ೧ | ೦ | ೦ |
| ಚಿತ್ರಾಂಗದಾ | .. | ೧ | ೦ | ೦ |
| ಕಾನೂರು ಸುಬ್ಬಮ್ಮ ಹೆಗ್ಗಡಿತಿ | .. | ೨ | ೮ | ೦ |
| ನನ್ನ ದೇವರು ಮತ್ತು ಇತರ ಕಥೆಗಳು | .. | ೧ | ೦ | ೦ |
| ಮೂರು ನಾಟಕಗಳು | .. | ೧ | ೪ | ೦ |
| ಶೂದ್ರ ತಪಸ್ವಿ | .. | ೦ | ೮ | ೦ |
| ಸಾಹಿತ್ಯಪ್ರಚಾರ ಮತ್ತು ಇತರ ಭಾಷಣಗಳು | .. | ೧ | ೪ | ೦ |

**ಪು. ತಿ. ನರಸಿಂಹಾಚಾರ್ಯರ—**

| | | | | |
|---|---|---|---|---|
| ಅಹಲ್ಯೆ | .. | ೧ | ೮ | ೦ |
| ದೋಣಿಯ ಬಿನದ ಮತ್ತು ಕವಿ | .. | ೧ | ೦ | ೦ |

**ತೀ. ನಂ. ಶ್ರೀಕಂಠಯ್ಯನವರ—**

| | | | | |
|---|---|---|---|---|
| ರಾಕ್ಷಸನ ಮುದ್ರಿಕೆ | .. | ೧ | ೪ | ೦ |

**ಜಿ. ಆರ್. ರಂಗಸ್ವಾಮಿಯವರ—**

| | | | | |
|---|---|---|---|---|
| ಪರಮಾಣು | .. | ೫ | ೦ | ೦ |

**ಎಂ. ವಿ. ಸೀತಾರಾಮಯ್ಯನವರ—**

| | | | | |
|---|---|---|---|---|
| ತೆರೆಮರೆಯ ಚಿತ್ರಗಳು | .. | ೧ | ೮ | ೦ |

**ಗೊರೂರು ರಾಮಸ್ವಾಮಿ ಐಯಂಗಾರ್ಯರ—**

| | | | | |
|---|---|---|---|---|
| ಸಾಹಿತ್ಯದ ಜೀವಾಳ | .. | ೦ | ೧೦ | ೦ |
| ಹಳ್ಳಿಯ ಬಾಳು | .. | ೧ | ೪ | ೦ |

---

**ಕಾವ್ಯಾಲಯ * ಪ್ರಕಾಶಕರು * ಮೈಸೂರು**

ಬೆಂಗಳೂರು